ಯ ಪ್ರಕಟನೆ

# ಶ್ರೀಬಸವಣ್ಣನವರು

( ಚಿತ್ರಗಳೊಂದಿಗೆ )

"ಅರಿತರೆ ಶರಣ,-ಮರೆತರೆ ಮಾನವ"

— ಶ್ರೀಬಸವಣ್ಣನವರು




ಚಿಟಗೇರಿ ಕೃಷ್ಣಶರ್ಮ

೧೯೪೬

ಸಾಹಿತ್ಯ ಭಾಂಡಾರ, ಹುಬ್ಬಳ್ಳಿ

ಮೊದಲನೆಯ ಮುದ್ರಣ ೧೯೩೪
ಎರಡನೆಯ ಮುದ್ರಣ ೧೯೪೨
ಮೂರನೆಯ ಮುದ್ರಣ ೧೯೪೬





ಬೆಲೆ ೦-೮-೦

ಮೂರನೆಯ ಮುದ್ರಣ

ಮುದ್ರಕರು:
ಶ್ರೀ. ವಿ. ಯು. ಜಠಾರ
ಕರ್ನಾಟಕ ಪ್ರಿಂಟಿಂಗ್ ವರ್ಕ್ಸ್
ಧಾರವಾಡ

ಪ್ರಕಾಶಕರು:
ಶ್ರೀ. ರಂ. ರಾ. ದಿವಾಕರ
ಕಾರ್ಯದರ್ಶಿ ಕರ್ನಾಟಕ ಶಿಕ್ಷಣ ಸಮಿತಿ
ಹುಬ್ಬಳ್ಳಿ




# ಶ್ರೀ ಬಸವಣ್ಣನವರು

## ೧ ಮೊದಲಿನ ಮಾತು

ಎಲ್ಲರಂತೆಯೆ ಮನುಷ್ಯರಾಗಿ ಹುಟ್ಟಿ, ಜನರ ಉಪ-ಕಾರದಲ್ಲಿಯೆ ಜೀವನವನ್ನು ಕಳೆದು, ದೇವತೆಗಳ ಪದವಿಗೇರಿದ ಮಹಾಪುರುಷರು ನಮ್ಮ ಕನ್ನಡನಾಡಿನಲ್ಲಿ ಹಲವು ಜನರು ಆಗಿಹೋಗಿರುವರು. ಅಂತಹರ ಮಾಲಿಕೆಯಲ್ಲಿ ಮೊದಮೊದಲೆ ಸೇರಿಸಬೇಕಾದವರಲ್ಲಿ ಶ್ರೀ ಬಸವಣ್ಣ-ನವರೂ ಒಬ್ಬರು. ಸಾಮಾನ್ಯ ಜನರು ಮಾಡಲಾರದಂತಹ ಮಹಾಕಾರ್ಯಗಳನ್ನು ಮಾಡಿ ಹೋದವರೆಲ್ಲರನ್ನೂ ಒಂದೊಂದು ದೇವತೆಗಳ ಅವತಾರವೆಂದು ಹೇಳುತ್ತಿರುವುದು ನಮ್ಮ ಜನರದೊಂದು ರೀತಿ; ಅದರಂತೆಯೆ ಶ್ರೀ ಬಸವಣ್ಣನವರನ್ನು ಮಹಾದೇವನ ವಾಹನವಾಗಿದ್ದ ನಂದೀಶ್ವರನ ಅವತಾರವೆಂದು ಭಾವಿಕರು ನಂಬುತ್ತಾರೆ. ಬಸವಣ್ಣನವರ ವಿಷಯಕವಾದ ಮೊದಲಿನ ಗ್ರಂಥಗಳೆ-ಲ್ಲವೂ ಇದೇ ಮಾತನ್ನೆ ಎತ್ತಿ ಹಿಡಿದಿರುವವು.

ಕ್ರಿಸ್ತಶಕದ ಹನ್ನೆರಡನೆಯ ಶತಮಾನದ ಪ್ರಾರಂಭಕಾಲವು; ಆಗಿನ ರಾಜಕೀಯ ವ್ಯವಸ್ಥೆಯೆ ಅದೊಂದು ಬಗೆಯದು. ಪ್ರತಿಯೊಂದು ಹಳ್ಳಿಯೂ ಸ್ವತಂತ್ರವಾಗಿರು

ತಿದ್ದಿತು. ಅಲ್ಲಿಯ ಎಲ್ಲ ಬಗೆಯ ಅಧಿಕಾರಗಳೂ ಗೌಡನ ಕಡೆಗೆ ಇರುತಿದ್ದುವು. ಆಡಳಿತದ ಹೊಣೆಗಾರಿಕೆಯೆಲ್ಲವೂ ಗೌಡನ ತಲೆಯ ಮೇಲೆಯೆ; ಆದರೆ ಮೇಲಿನ ರಾಜನಿಗೆ ಗೊತ್ತುಮಾಡಿದ ಕಾಣಿಕೆಯನ್ನು ಗೌಡನು ಸಲ್ಲಿಸಬೇಕಾಗುತಿದ್ದಿತು. ಈ ಗೌಡರ ಹೆಸರುಗಳ ಮುಂದೆ "ಅರಸ" ಎಂಬ ಪದವನ್ನು ಸೇರಿಸಿ, "ರಾಮರಸ, ಸಿದ್ಧರಸ, ಗಂಗರಸ" ಎಂದು ಕರೆಯುತಿದ್ದುದು, ಆ ಕಾಲದ ಇತಿಹಾಸದಿಂದ ತಿಳಿಯುತ್ತದೆ.

ವಿಜಾಪುರ ಜಿಲ್ಹೆಯಲ್ಲಿ "ಬಾಗೇವಾಡಿ" ಎಂಬ ಹೆಸರಿನ ತಾಲೂಕಿನ ಮುಖ್ಯ ಗ್ರಾಮವಿಲ್ಲವೆ? ಅದನ್ನು "ಬಸವನ ಬಾಗೇವಾಡಿ" ಎಂತಲೂ ಕರೆಯುತಿರುವುದುಂಟು. ಅದು ಶ್ರೀ ಬಸವಣ್ಣನವರು ಹುಟ್ಟಿದೂರು; ಎಂತಲೆ ಈ ಹೆಸರು ಬಂದಿದೆ. ಈ ಬಾಗೇವಾಡಿ ವಿಜಾಪುರದಿಂದ ಆಗ್ನೇಯಕ್ಕೆ ಇಪ್ಪತ್ತೈದು ಮೈಲುಗಳ ಮೇಲಿದೆ. ಹನ್ನೆರಡನೆಯ ಶತಮಾನದಲ್ಲಿಯೂ ಈ ಊರು ಬಾಗೇವಾಡಿ ಎಂಬ ಹೆಸರಿನಿಂದಲೆ ಪ್ರಸಿದ್ಧವಾಗಿದ್ದಿತು.

# ೨ ಹುಟ್ಟಿದುದು

ಮಾದರಸನು ಬಾಗೇವಾಡಿಯ ಗೌಡನು. "ಮಂಡಿಗೆ" ಎಂದು ಈತನ ಮನೆತನಕ್ಕೆ ಹೆಸರು. ಇವನು ಶಿವೋಪಾಸಕನಾದ ಆರಾಧ್ಯಬ್ರಾಹ್ಮಣನು. ಸತ್ಯವಂತನೂ ಸುಶೀಲನೂ ಆಗಿದ್ದನು. ಪರಂಪರೆಯಿಂದ ನಡೆದು-ಕೊಂಡು ಬಂದ ಕುಲಾಚಾರಗಳನ್ನು, ಮಾದರಸನು ಎಂದೂ ಮರೆತು ನಡೆಯನು. ಗ್ರಾಮದ ಜನರಿಗೆ ಹಿತ ವಾಗುವಂತಹ ತನ್ನ ನಡವಳಿಕೆಯಿಂದ, ಪೂರ್ತಿಯಾಗಿ ಅವರ ಮೆಚ್ಚಿಕೆಗೆ ಪಾತ್ರನಾಗಿದ್ದನು.

ಮಾದರಸನ ಹೆಂಡತಿಯ ಹೆಸರು "ಮಾದ-ಲಾಂಬಿಕೆ." ಆಕೆ ಯಾವಾಗಲೂ ಗಂಡನ ಕೆಲಸಗಳಲ್ಲಿ ಅನುಕೂಲೆಯಾಗಿ ನಡೆದುಕೊಳ್ಳುವಳು. ಕೋಪದಿಂದ ಮುಖ ಮುದುರಿಸಿದ ಮಾದಲಾಂಬಿಕೆಯನ್ನು ಯಾರೂ ಕಂಡರಿಯರು. ಆಕೆಯ ಪರೋಪಕಾರ ಬುದ್ಧಿಯನ್ನು ಹಳ್ಳಿಯಲ್ಲಿಯ ಎಲ್ಲ ಜನರೂ ಹೊಗಳಿ ಹಾಡುತ್ತ ಲಿರುವರು.

ಮಾದರಸ ಮಾದಲಾಂಬಿಕೆಯರ ಸಂಸಾರ ಸೌಖ್ಯ ದಲ್ಲಿ ಯಾವ ಕೊರತೆಯೂ ಇರಲಿಲ್ಲ; ಆದರೆ ಮಕ್ಕಳಿಲ್ಲದ ದುಃಖವೊಂದು ಮಾತ್ರ ಹಗಲಿರುಳೂ ಆ ಗಂಡ-ಹೆಂಡಿರ ಎದೆಯನ್ನು ಕೊರೆಯುತಿದ್ದಿತು. ಕುಲಪುರೋಹಿತರ ಹೇಳಿಕೆಯಂತೆ ಮಾದಲಾಂಬಿಕೆಯು ನಂದೀಶ್ವರನ ವ್ರತ

ವನ್ನು ಕೈಕೊಂಡಳು. ಪ್ರತಿ ಸೋಮವಾರವೂ ನಿರಾಹಾರ ದಿಂದಿದ್ದು, ಬಹಳ ಭಕ್ತಿಯಿಂದ, ಪೂಜೆ-ಜಪಗಳೊಂದಿಗೆ, ಈ ವ್ರತವನ್ನು ಆಚರಿಸುತಿದ್ದಳು.

ಮೂರು ವರ್ಷಗಳ ವರೆಗೆ ತಪ್ಪದೆ ಈ ವ್ರತಾಚರಣೆ ನಡೆಯಿತು. ನಂದೀಶ್ವರನು ಮಾದಲಾಂಬಿಕೆಯ ನಿಷ್ಠೆಗೆ ಮೆಚ್ಚಿದನೇನೋ! ಆಕೆ ಬಸಿರೆಯಾದಳು. ಪತಿಪತ್ನಿಯರ ಆನಂದಕ್ಕೆ ಅಳತೆಯಿಲ್ಲದಂತಾಯಿತು; ಅವರಿಗೆ ಮುಗಿಲು ಮೂರೇ ಬೆರೆಳು ಉಳಿದಂತಾಯಿತು. ಇನ್ನುಳಿದವರಂತೆ ತಾವೂ ಮಗುವಿಗೆ ಮುದ್ದಿಡುವ ದಿನವನ್ನು ಕಾಣುವೆ ವೆಂದು ಹಿರಿಹಿರಿ ಹಿಗ್ಗಿದರು.

ಒಂಬತ್ತು ತಿಂಗಳು ತುಂಬಿದ ಮೇಲೆ ಒಂದು ದಿನ, ಶುಭಯೋಗಗಳೆಲ್ಲವೂ ಒದಗಿ ಬಂದಿದ್ದ ಮುಹೂರ್ತ ದಲ್ಲಿ, ಮಾದಲಾಂಬಿಕೆಯು ಗಂಡುಕೂಸನ್ನು ಹೆತ್ತಳು. ಆದರೆ ಒಂದು ವಿಚಿತ್ರ ನಡೆಯಿತು; ಹುಟ್ಟಿದ ಕೂಸು ಮುಚ್ಚಿದ ಕಣ್ಣು ತೆರೆಯಲಿಲ್ಲ, ಬಾಯಿಬಿಟ್ಟು ಅಳಲಿಲ್ಲ. ತಂದೆ ತಾಯಿಗಳಿಬ್ಬರೂ ತುಂಬ ಗಾಬರಿಗೊಂಡರು. ಏನು ಮಾಡಬೇಕೆಂಬುದನ್ನು ಅರಿಯದವರಾದರು.

ಅದೇ ಸಮಯದಲ್ಲಿ ಜಾತವೇದ ಮುನಿಗಳು ಬಾಗೇ ವಾಡಿಗೆ ಬಂದ ಸುದ್ದಿಯು ಮಾದರಸನಿಗೆ ಗೊತ್ತಾಯಿತು. ಜಾತವೇದ ಮುನಿಗಳು ಸಂಗಮನಾಥನ ಉಪಾಸನೆ ಯನ್ನು ಮಾಡಿ, ಶೈವಸಿದ್ಧಿಯನ್ನು ಪಡೆದವರೆಂದು ಎಲ್ಲೆ

ಲ್ಲಿಯೂ ಪ್ರಸಿದ್ಧಿ. ಮಾದರಸನು ಓಡಿಹೋಗಿ, ತನ್ನ ಮಗುವಿನ ಸಮಾಚಾರವನ್ನು ಆ ಮುನಿಗಳಿಗೆ ತಿಳುಹಿದನು. ದಯೆಯಿಟ್ಟು ಮನೆಯ ವರೆಗೆ ಬರಬೇಕೆಂದು ಬಿನ್ನವಿಸಿಕೊಂಡನು. ಜಾತವೇದ ಮುನಿಗಳು ಮಾದರಸನ ಮನೆಗೆ ಬಂದರು.

ಜ್ಯೋತಿಷಶಾಸ್ತ್ರದಲ್ಲಿಯೂ ಸಾಮುದ್ರಿಕ ಶಾಸ್ತ್ರದಲ್ಲಿಯೂ ಜಾತವೇದರು ತುಂಬ ಗಟ್ಟಿಗರು. ಅವರು ಮಗುವು ಹುಟ್ಟಿದ ವೇಳೆಯನ್ನು ಗುಣಿಸಿ ನೋಡಿದರು. ಮಗುವಿನ ಅಂಗಲಕ್ಷಣಗಳನ್ನೂ ನೋಡಿದರು. "ಈತನು ಮುಂದೆ ಬಲು ದೊಡ್ಡವನಾಗುವನು. ಚೆನ್ನಾಗಿ ಸಾಕಿ ಸಲಹಿರಿ" ಎಂದು ಹೇಳಿದರು. ಸಂಗಮನಾಥನ ಪ್ರಸಾದದ ವಿಭೂತಿಯನ್ನು ಕೊಟ್ಟು, ಕೂಸಿನ ಮೈಗೆಲ್ಲ ಬಳಿಯುವಂತೆ ತಿಳುಹಿದರು. ಮುನಿಗಳು ಹೇಳಿದಂತೆ ಮಾದಲಾಂಬಿಕೆಯು ಮಾಡಲು, ಕೂಸು ಪಳ್ಳನೆ ಕಣ್ಣು ತೆರೆಯಿತು. ತಾಯಿಯ ಮುಖವನ್ನು ನೋಡಿ ಕಿಲಕಿಲನೆ ನಕ್ಕಿತು.

ಮಾದರಸ ಮಾದಲಾಂಬಿಕೆಯರು ಮಗುವಿನ ನಗೆಯನ್ನು ಕಂಡು, ಆನಂದದ ಕಡಲಲ್ಲಿ ಈಜಾಡಿದರು. ಜಾತವೇದ ಮುನಿಗಳು ಮಗುವಿಗೆ ಲಿಂಗದೀಕ್ಷೆಯನ್ನು ಕೊಟ್ಟು 'ಬಸವ' ಎಂದು ಹೆಸರಿಡುವುದಕ್ಕೆ ಹೇಳಿ, ಮಾದರಸನ ಒಪ್ಪಿಗೆಯನ್ನು ಪಡೆದು ಹೊರಟುಹೋದರು. ಅಂದು

ಬಾಗೇವಾಡಿಯ ಬೀದಿಬೀದಿಗಳಲ್ಲಿಯೂ ಸಕ್ಕರೆಯ ಸುರಿಮಳೆಯಾಯಿತು.

---

## ೩. ಹುಡುಗತನ

ಬಸವಣ್ಣನ ಎಳೆತನವೆಲ್ಲವೂ ತಾಯಿತಂದೆಗಳ ಮನವನ್ನು ತಣಿಸುವ ಕೂಸಿನಾಟದಲ್ಲಿ ಕಳೆದುಹೋಯಿತು. ಅಯ್ದು ವರ್ಷ ವಯಸ್ಸಿನ ಬಸವಣ್ಣನ ಬಾಲಮೂರ್ತಿಯನ್ನು ನೋಡಬೇಕು; ಅದೆಂತಹ ಚೆಲುವಾದ ಮುಖವು! ಅದೆಂತಹ ಮಧುರವಾದ ಧ್ವನಿಯು! ಅದೆಷ್ಟು ಸ್ಪಷ್ಟವಾದ ಮಾತುಗಳು! ಆತನು ಮಣ್ಣು ಕಲ್ಲುಗಳಿಂದ ಶಿವನ ಮೂರ್ತಿಯನ್ನು ಮಾಡಿಕೊಳ್ಳುವನು; ಅದರ ಮುಂದೆ ಆಸನ ಹಾಕಿ ಕುಳಿತುಕೊಳ್ಳುವನು. ತನಗೆ ತಿಳಿದಂತೆ ಆ ಮೂರ್ತಿಯನ್ನು ಪೂಜಿಸುವನು. ಒಂದೊಂದು ಸಲ ತಂದೆತಾಯಿಗಳು ಕಲಿಸಿದ ಶಿವಸ್ತೋತ್ರದ ಪದ್ಯಗಳನ್ನು ತನ್ನ ಮಂಜುಲವಾದ ಕಂಠದಿಂದ ಹಾಡುವನು. ಇದೆಲ್ಲವೂ ಮಾದರಸ ಮಾದಲಾಂಬಿಕೆಯರನ್ನು ಅಚ್ಚರಿಗೊಳಿಸುತಿದ್ದಿತು. ಅವರಿಗೆ ಬಸವಣ್ಣನನ್ನು ಎಷ್ಟು ನೋಡಿದರೂ ಸಾಕೆನಿಸದು; ಅದೆಷ್ಟು ಮುತ್ತುಗಳನ್ನಿಟ್ಟರೂ ಸಾಕೆನಿಸದು.

ಹೇಳಿದುದನ್ನು ಕೂಡಲೆ ಹಿಡಿದುಕೊಳ್ಳುವಂತಹದು ಬಸವಣ್ಣನ ಬುದ್ಧಿ. ಬರೆಯುವುದನ್ನೂ ಓದುವುದನ್ನೂ ಕಲಿಯುವುದಕ್ಕೆ ಆತನಿಗೆ ಬಹಳ ಕಾಲ ಬೇಕಾಗಲಿಲ್ಲ. ಎಂಟೇ ಎಂಟು ವರ್ಷ ವಯಸ್ಸಿನ ಬಸವಣ್ಣನ ಮನದ ವಿಕಾಸವನ್ನು ಕಂಡು, "ನಾ ನಾ" ಎನ್ನುವ ಪಂಡಿತರೂ ಬೆರಗುಗೊಂಡು ಬೆರಳನ್ನು ಕಚ್ಚುತಿದ್ದರು.

ಓರಗೆಯ ಹುಡುಗರೊಂದಿಗೆ ಬಸವಣ್ಣನು ಜಗಳ ಮಾಡಿದುದನ್ನು ಯಾರೂ ಕಾಣರು. ಹುಡುಗರೆಲ್ಲರದೂ ಬಸವಣ್ಣನಲ್ಲಿ ಬಲು ವಿಶ್ವಾಸ; ಯಾವಾಗಲೂ ಆತನನ್ನು ತಮ್ಮ ಮುಂದಾಳನ್ನಾಗಿ ಮಾಡಿಕೊಂಡಿರುತಿದ್ದರು. ಬಸವಣ್ಣನ ನೆರೆಮನೆಯ ಹುಡುಗ, ಕೃಷ್ಣನಂತೂ ಆತನನ್ನು ಎಂದೂ ಅಗಲಿ ಇರುತಿರಲಿಲ್ಲ.

ಒಂದು ದಿನ ಬಸವಣ್ಣನು ಸ್ನಾನಕ್ಕೆಂದು ಬಾವಿಗೆ ಹೋದ. ಜೊತೆಯಲ್ಲಿ ಕೃಷ್ಣನೂ ಇದ್ದ. ಈಜುವುದರಲ್ಲಿ ಬಸವಣ್ಣನನ್ನು ಹಿಂದೆ ಹಾಕುವವರೆ ಇರಲಿಲ್ಲ. ಕೃಷ್ಣನಿಗೆ ಈಜು ಚೆನ್ನಾಗಿ ಬರದು. ಇಬ್ಬರೂ ಬಾವಿಯಲ್ಲಿಳಿದು, ಈಜಾಡಲು ತೊಡಗಿದರು. ಈಜು ಬಾರದ ನಾಲ್ಕಾರು ಹುಡುಗರು ಮೇಲೆ ನಿಂತು ನೋಡುತಿದ್ದರು. ಬಸವಣ್ಣನು ನಗೆಯಾಟವಾಡುತ್ತ, ಕೃಷ್ಣನನ್ನು ನೀರೊಳಗೆ ತಬ್ಬಲು ಅವನು ಮುಳುಗಿಬಿಟ್ಟನು; ಆದರೆ ಮುಳುಗಿದ ಕೃಷ್ಣನು ಮರಳಿ ಮೇಲಕ್ಕೇಳಲೆ ಇಲ್ಲ. ಬಸವಣ್ಣನು

ಗಾಬರಿಯ ದನಿಯಲ್ಲಿ "ಅಯ್ಯೋ! ಕೃಷ್ಣನನ್ನು ಮುಳುಗಿಸಿದೆ, ಮೇಲಕ್ಕೆ ಬರಲೇ ಇಲ್ಲ." ಎಂದು ಕೂಗಿಕೊಂಡ.

ಮೇಲೆ ನಿಂತಿದ್ದ ಹುಡುಗರೆಲ್ಲರೂ ಕೂಗಾಡುತ್ತ ಓಡಿಹೋದರು. ಕೃಷ್ಣನ ತಾಯಿತಂದೆಗಳಿಗೆ ಎಲ್ಲವನ್ನೂ ಹೇಳಿದರು. ಇತ್ತ ಬಸವಣ್ಣನು ಹುಡುಗರೆಲ್ಲರೂ ಹೋದುದನ್ನು ಕಂಡು, ತಾನೂ ನೀರೊಳಕ್ಕೆ ಮುಳುಗಿದ. ಕೃಷ್ಣನನ್ನು ಮೇಲಕ್ಕೆತ್ತಿಕೊಂಡು ಬಂದ. ದಂಡೆಗೆ ತಂದು ಉಪಚರಿಸಿದ. ಬಳಿಕ ವಿನೋದ ಮಾಡೋಣವೆಂದು ಹೇಳಿ, ಆತನನ್ನು ಬಾವಿಯಲ್ಲಿಯೆ ಒಂದೆಡೆಯಲ್ಲಿ ಅಡಗಿ-ಕೊಂಡಿರುವಂತೆ ಹೇಳಿದ. ತಾನು ಮುಖ ಸಣ್ಣಗೆ ಮಾಡಿ-ಕೊಂಡು ಮೇಲೆ ಬಂದು ನಿಂತ.

ಐದಾರು ನಿಮಿಷಗಳಲ್ಲಿಯೆ ಕೃಷ್ಣನ ತಂದೆ ತಾಯಿಗಳು ಅಳುತ್ತ ಕರೆಯುತ್ತ ಅಲ್ಲಿಗೆ ಬಂದರು. ಅವರ ಜೊತೆಯಲ್ಲಿಯೆ ಊರೊಳಗಿನ ಬೇರೆ ಜನರು ಬಂದು ನೆರೆದರು. ಬಾವಿಯಲ್ಲಿಳಿಯುವ ಧೈರ್ಯವು ಯಾರಿಗೂ ಆಗಲೊಲ್ಲದು. "ಭೂತದ ಬಾವಿ" ಎಂದು ಬಾವಿಗೆ ಎಲ್ಲರೂ ಹೆದರುತಿದ್ದರು. ಆ ಬಾವಿಗೆ ಸ್ನಾನಕ್ಕೆ ಬಂದುದಕ್ಕಾಗಿ, ಎಲ್ಲರೂ ಬಸವಣ್ಣಗೆ ಬಗೆಬಗೆಯಾಗಿ ಮಾತನಾಡಿದರು. ಕೃಷ್ಣನ ತಾಯಿತಂದೆಗಳಂತೂ "ನಿನ್ನದೇ ಎಲ್ಲವೂ ತುಂಟಾಟ" ಎಂದು ಬಸವಣ್ಣನನ್ನು ಬೈದು ಬೈದು ಅಳತೊಡಗಿದರು.

ಬಸವಣ್ಣನು ಸುಮ್ಮನೆ ನಿಂತುಕೊಂಡು ಎಲ್ಲರ ಮಾತುಗಳನ್ನೂ ಕೇಳಿದ. ಒಳಗೊಳಗೆಯೇ ನಕ್ಕುಬಿಟ್ಟ. ಆ ಮೇಲೆ "ಕೃಷ್ಣಾ! ಕೃಷ್ಣಾ! ಬಂದುಬಿಡಪ್ಪಾ!" ಎಂದು ಕೂಗಿದ. ಮುಗುಳುನಗೆ ನಗುತ್ತ ಕೃಷ್ಣನು ಬಾವಿಯ ಮೆಟ್ಟಲನ್ನೇರಿ, ಓಡುತ್ತೋಡುತ್ತ ಮೇಲೆ ಬಂದು ನಿಂತ. ನೆರೆದವರಿಗೆಲ್ಲ ಆಶ್ಚರ್ಯವಾಯಿತು. ಕೃಷ್ಣನ ತಾಯಿ ತಂದೆಗಳಿಗೆ ಆನಂದವಾಯಿತು. ಅವರು ಮಗನನ್ನು ಪ್ರೀತಿಯಿಂದ ತಬ್ಬಿಕೊಂಡರು. ಬಸವಣ್ಣನನ್ನು ಬೈದುದಕ್ಕಾಗಿ ಪಶ್ಚಾತ್ತಾಪಪಟ್ಟರು. ನೆರೆದವರೆಲ್ಲರೂ "ಬಸವಣ್ಣನಂತಹ ಈಜುಗಾರನು ಜೊತೆಗಿದ್ದ ಮೇಲೆ, ಜೀವಕ್ಕೆ ಭಯವೆಲ್ಲಿಯದು?" ಎಂದು ಮಾತಾಡುತ್ತ ಮನೆಗೆ ಮರಳಿದರು.

---

## ೪. ಮುಂಜಿಯೆಂದು ಮನೆಬಿಟ್ಟ

ಮಾದರಸ ಮಾದಲಾಂಬಿಕೆಯರು ಬಸವಣ್ಣನ ಉಪನಯನದ ಸಿದ್ಧತೆಯನ್ನು ನಡೆಯಿಸಿದರು. ಈ ಮಾತು ಬಸವಣ್ಣನಿಗೆ ಗೊತ್ತಾಯಿತು. ವೈದಿಕ ಧರ್ಮದಲ್ಲಿಯ ಸಾರವತ್ತಾದ ತತ್ವಗಳೆಲ್ಲವೂ ಹಾಳಾಗಿ, ಬರೀ-ಹುರುಳಿಲ್ಲದ-ಆಚಾರಗಳು ಮಾತ್ರ ಉಳಿದಿವೆಯೆಂದು, ಅವನ ಚುರುಕು ಬುದ್ಧಿಗೆ ಆಗಾಗ ಎನಿಸುತ್ತಿದ್ದಿತು. ತನ್ನ

ಬಾಳುವೆಯನ್ನು ಹೊಸದಾರಿಯಿಂದ ಸಾಗಿಸಬೇಕೆಂದು, ಬಸವಣ್ಣನು ಯಾವಾಗಲೂ ಯೋಚಿಸುತಿದ್ದನು. "ಕುರುಡ ನಂಬುಗೆಯ ಜನರು, ಹುರುಳಿಲ್ಲದ ಆಚಾರಗಳ ಬೆನ್ನು ಹತ್ತಿ, ಕುರಿಗಳಂತೆ ಹಳ್ಳಕ್ಕೆ ಬೀಳುತ್ತಿರುವರಲ್ಲ!" ಎಂದು ಅವನು ಕ್ಷಣಕ್ಷಣಕ್ಕೂ ವ್ಯಥೆಪಡುತಿದ್ದನು.

ಹೊಸ ದಾರಿಯನ್ನು ಹುಡುಕಬೇಕೆಂದು ಹವಣಿಸುತಿದ್ದ ಬಸವಣ್ಣನಿಗೆ, ಈ ಉಪನಯನದ ವೇಷಗಾರಿಕೆಯು ಬೇಡವಾಯಿತು. ಇದಕಾಗಿ ತಂದೆತಾಯಿಗಳೊಡನೆ ವಿನಯಪೂರ್ವಕವಾಗಿ ವಾದಿಸತೊಡಗಿದನು. "ಕುಲಾಚಾರವನ್ನು ಮೀರುವುದು ಮಹಾಪಾಪ!" ಎಂದವರು ಹೇಳಿದರು. ಅದಕ್ಕೆ ಬಸವಣ್ಣನು ಹೇಳಿದನು: "ಕಳವು ಮಾಡಿದರೆ ಪಾಪ, ಹುಸಿಯು ನುಡಿಯುವುದು ಪಾಪ, ಮುನಿಸುಗೊಳ್ಳುವುದು ಪಾಪ! ತನ್ನನ್ನು ತಾನೆ ಹೊಗಳಿದರೆ ಪಾಪ, ಇನ್ನೊಬ್ಬರನ್ನು ತೆಗಳಿದರೆ ಪಾಪ! ಇದನ್ನರಿತುಕೊಂಡು ನಡೆದರೆ, ಯಾವ ಪಾಪಗಳು ಏನು ಮಾಡುವವು? ದೇವರು ಮೆಚ್ಚುವ ಮಾರ್ಗವು ಇದೇ!"

ಬಸವಣ್ಣನ ಸಂಪ್ರದಾಯಭಂಗದ ನಡೆವಳಿಕೆಗೆ ತಂದೆತಾಯಿಗಳು ಸಿಡಿಮಿಡಿಗೊಂಡರು. ಮಗನ ಮೇಲಿನ ಮಮತೆಯನ್ನು ಮರೆತುಬಿಟ್ಟರು. ಎಂದೂ ಹೊಂದದಷ್ಟು ಕೋಪ-ಕಳವಳಗಳನ್ನು ಹೊಂದಿದರು. "ನೀನು ಉಪನಯನವನ್ನು ಮಾಡಿಸಿಕೊಳ್ಳಲೇಬೇಕು" ಎಂದು ಬಲ-

ವಂತಪಡಿಸಿದರು. ಆ ದಿನದ ಇರುಳಿನಲ್ಲಿಯೆ ಬಸವಣ್ಣನು ಮನೆಯಿಂದ ಮಾಯವಾದನು. ಮಗನ ವಿಯೋಗದಿಂದ ಮಾದರಸ ಮಾದಲಾಂಬಿಕೆಯರಿಗೆ ಅತಿಶಯ ವ್ಯಸನ ವಾಯಿತು; ಆದರೂ "ಕುಲಪರಂಪರೆಯನ್ನು ಮೀರಿ ನಡೆಯುವ ಮಗನನ್ನು ತೆಗೆದುಕೊಂಡಾದರೂ ಮಾಡುವು-ದೇನು?" ಎಂಬ ವಿಚಾರದಿಂದ, ತಮ್ಮ ಕರುಳನ್ನು ಕಲ್ಲನ್ನಾಗಿ ಮಾಡಿಕೊಂಡರು.

---

## ೫. ಸಂಗಮನಾಥನ ಸಹವಾಸ

ಬಸವಣ್ಣನು ಮನೆಯನ್ನು ಬಿಟ್ಟು ಹೋದುದು ತುಂಟಾಟಕ್ಕಾಗಿ ಅಲ್ಲ; ನಿಜವಾದ ವಿದ್ಯೆಯನ್ನು ಗಳಿಸ ಲಿಕ್ಕೆ; ತಾನು ಒಳ್ಳೆಯ ದಾರಿಯನ್ನು ಕಂಡುಕೊಂಡು, ಇನ್ನುಳಿದ ಜನರಿಗೂ ಆ ದಾರಿಯನ್ನು ತೋರಿಸಲಿಕ್ಕೆ.

ಕೃಷ್ಣಾ ಮತ್ತು ಮಲಾಪಹಾರಿಗಳ ಸಂಗಮ ಸ್ಥಳವು ವಿಜಾಪುರ ಜಿಲ್ಹೆಯಲ್ಲಿದೆ. ಸಂಗಮಕ್ಕೆ ಕನ್ನಡದಲ್ಲಿ ಸರಿಯಾದ ಅರ್ಥವು "ಕೂಡಲು" ಎಂದು; ಆದರೆ ಜನಸಾಮಾನ್ಯರ ಬಾಯಲ್ಲಿ, ಈ ಸ್ಥಳವು "ಕೂಡಲು ಸಂಗಮ" ಎಂದು ಹೆಸರನ್ನು ಹೊಂದಿದೆ. ಇಲ್ಲಿಯ ಸಂಗಮೇಶ್ವರನ ದೇವಾಲಯವು, ಅಂದಿನಿಂದ ಇಂದಿನ ವರೆಗೂ ಹೆಸರುವಾಸಿಯಾಗಿದೆ.

ಹುಟ್ಟಿದೊಡನೆಯೆ ಬಸವಣ್ಣನಿಗೆ ಪ್ರಸಾದವನ್ನು ಕೊಟ್ಟು ಹೋದ ಜಾತವೇದ ಮುನಿಗಳು ಕೂಡಲದ ಸಂಗಮನಾಥನ ಉಪಾಸಕರು. ಹೊಸ ವಿಚಾರದವರು. ಹಳೆಯದರಲ್ಲಿಯ ಹುಳುಕುಗಳನ್ನೆಲ್ಲ ಕಂಡು ಹಿಡಿದವರು. ಕುರುಡ ನಂಬಿಗೆಯ ಜನರನ್ನು ಸರಿಯಾದ ದಾರಿಗೆ ತಿರುಗಿಸುವುದು ಹೇಗೆಂದು, ಹಗಲಿರುಳೂ ಯೋಚಿಸುವವರು. ಆ ಮುನಿಗಳ ಆಶ್ರಮವು ಕೂಡಲು ಸಂಗಮದಲ್ಲಿಯೆ ಇದ್ದಿತು.

ಮನೆಯಿಂದ ಹೊರಟ ಬಸವಣ್ಣನು ಕೂಡಲಿಗೆ ಬಂದನು. ಜಾತವೇದ ಮುನಿಗಳ ಆಶ್ರಯದಲ್ಲಿದ್ದು-ಕೊಂಡು, ಬೇರೆ ಬೇರೆ ವಿಷಯಗಳನ್ನು ಅಭ್ಯಾಸಿಸಲು ತೊಡಗಿದನು. ವ್ಯವಹಾರ, ಪರಮಾರ್ಥಗಳೆರಡರಲ್ಲಿಯೂ ಪಾರಂಗತನಾಗುವಂತಹ ವಿದ್ಯೆಯನ್ನು ಪಡೆಯಬೇಕೆಂದು ಬಸವಣ್ಣನ ಬಯಕೆ. ಯೋಗ್ಯ ಗುರುಗಳು ದೊರೆತು ಅವನ ಬಯಕೆ ನೆರವೇರಿತು.

"ಬಸವಣ್ಣಾ! ಯಾವ ಕಾರ್ಯಕ್ಕೂ ಮನುಷ್ಯ-ಯತ್ನದೊಂದಿಗೆ ದೇವರ ಒಲುಮೆಯೂ ಆವಶ್ಯಕವಾಗಿ ಬೇಕು" ಎಂದು ಗುರುಗಳು ಹೇಳಿದ ಮಾತು, ಬಸವಣ್ಣನ ಮನದಲ್ಲಿ ಮನೆಮಾಡಿತು. ಆತನು ಸಂಗಮ-ನಾಥನ ಸೇವೆಯನ್ನು ಬಗೆ ಬಗೆಯಿಂದ ಮಾಡಲು ತೊಡಗಿದನು. ವಿದ್ಯಾಭ್ಯಾಸಕ್ಕೆ ತೋರಿಸಿದಷ್ಟು ಉತ್ಕ-

ಟತೆಯನ್ನೆ ಸಂಗಮನ ಭಜನ ಪೂಜನಗಳಲ್ಲಿಯೂ ತೋರಿಸಲಾರಂಭಿಸಿದನು.

ಬಸವಣ್ಣನು ಸಂಗಮನಾಥನನ್ನು ಒಂದೊಂದು ಸಲ, ತಾಯಿಯನ್ನಾಗಿ ಮಾಡಿ ತಾನು ಮಗನಾಗುವನು. ಇನ್ನೊಂದು ಸಲ, ತಾನು ತಾಯಿಯಾಗಿ ಸಂಗಮನಾಥನನ್ನು ಮಗನೆಂದು ಭಾವಿಸುವನು. ಮತ್ತೆ ಒಂದೊಂದು ಸಲ ತಾವಿಬ್ಬರೂ ಎಂದೂ ಅಗಲದ ಗೆಳೆಯರೆಂದು ತಿಳಿಯುವನು. ಎಷ್ಟೋ ಸಲ ಸಂಗಮನಾಥನು ಗಂಡನೆಂದೂ ತಾನು ಹೆಂಡತಿಯೆಂದೂ ಭಾವಿಸಿ ನಡೆದುಕೊಳ್ಳುವನು. ಬಸವಣ್ಣನ ಭಕ್ತಿಯೋಗವನ್ನು ಕಂಡು ಜಾತವೇದ ಮುನಿಗಳಿಗಾದ ಆನಂದವು ಅಷ್ಟಿಷ್ಟಲ್ಲ. ತಮ್ಮ ಮನಸಿನಲ್ಲಿದ್ದ ಕಾರ್ಯವನ್ನು ಈತನು ನಿಜವಾಗಿಯೂ ಮಾಡಲು ಸಮರ್ಥನಿರುವನೆಂದು ಅವರು ಗಟ್ಟಿಮುಟ್ಟಾಗಿ ತಿಳಿದುಬಿಟ್ಟರು.

---

## ೬ ಬಲದೇವ ಮಂತ್ರಿ

ಕಲ್ಯಾಣ ಪಟ್ಟಣವು ಇತಿಹಾಸ ಕಾಲದಲ್ಲಿ ಬಲು ಹೆಸರಾದ ರಾಜಧಾನಿಯಾಗಿದ್ದಿತು. ಕನ್ನಡಿಗರ ಹೃದಯ ದಲ್ಲಿ ಅಭಿಮಾನವನ್ನು ಉಕ್ಕೇರಿಸುವ ಚಾಲುಕ್ಯ ರಾಜ

ವಂಶದ ಒಂದು ಶಾಖೆಯವರು ಕಲ್ಯಾಣವನ್ನೆ ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ಈ ಶಾಖೆಯಲ್ಲಿ ಹುಟ್ಟಿದ ಎರಡನೆಯ ತೈಲಪನು ಹೇಡಿಯಾದುದರಿಂದ ರಾಜ್ಯವನ್ನಾಳಲು ಅಸಮರ್ಥನಾದನು. ಆಗ ಅವನ ಮಾಂಡಲಿಕರಲ್ಲಿ ಒಬ್ಬನಾದ ಕಲಚೂರಿ ವಂಶದ ಬಿಜ್ಜಳನು ಕಲ್ಯಾಣವನ್ನು ಆಕ್ರಮಿಸಿದನು. ತಾನೇ ರಾಜನಾಗಿ ಆಳಲು ತೊಡಗಿದನು.

ಬಿಜ್ಜಳನ ಮಂತ್ರಿಯು ಬಲದೇವನೆಂಬ ಹೆಸರಿನ ಆರಾಧ್ಯ ಬ್ರಾಹ್ಮಣನು. ಈತನು ಬಸವಣ್ಣನಿಗೆ ಸೋದರಮಾವನಾಗಬೇಕು. ಬಸವಣ್ಣನಲ್ಲಿ ಬಲದೇವನದು ಬಲು ಪ್ರೀತಿ. ಸೋದರಳಿಯನ ಸದ್ಗುಣ-ಸದಾಚಾರಗಳನ್ನು ಕೇಳಿಯೂ ನೋಡಿಯೂ ಆತನು ಅರಿತುಕೊಂಡಿದ್ದನು.

ಬಲದೇವನಿಗೆ ಗಂಗಾಂಬಿಕೆಯೊಬ್ಬಳೆ ಮಗಳು. ಗಂಡುಮಕ್ಕಳಿರಲೇ ಇಲ್ಲ. ಮದುವೆಗಾದ ಮಗಳನ್ನು ತಕ್ಕ ವರನಿಗೆ ಕೊಟ್ಟು ಅವನನ್ನು ಮನೆ ಅಳಿಯತನಕ್ಕಿಟ್ಟುಕೊಳ್ಳಬೇಕೆಂದು ಆ ಮುದುಕನ ಮನದ ಹಂಬಲ; ಆದರೆ ಬಸವಣ್ಣನ ಹೊರತು ಬೇರೆಯವರಾರೂ ಯೋಗ್ಯರೆಂದು ಕಾಣಲಿಲ್ಲ. ಬಲದೇವನು ತನ್ನ ಮಗಳ ಸುಖಜೀವನವನ್ನು ಅಪೇಕ್ಷಿಸಿದನು. ಬಸವಣ್ಣನು ಬ್ರಾಹ್ಮಣ ಧರ್ಮಕ್ಕೆ ವಿರೋಧಿಯಾಗಿ ನಡೆದುದನ್ನೂ ಮನದ ಮುಂದೆ ತಾರದೆ ಹೋದನು. ಬಸವಣ್ಣನನ್ನು ಕರೆದುಕೊಂಡು

ಬರುವುದಕ್ಕೆ ಓಲೆಯೊಂದಿಗೆ ಕುದುರೆಯಾಳುಗಳನ್ನು ಕಳುಹಿಸಿದನು.

---

## ೭ ಮದುವೆಯಾಯಿತು

ಬಲದೇವನ ಓಲೆಯನ್ನು ಬಸವೇಶ್ವರನು ನೋಡಿದನು. ಸಂಗಮನಾಥನನ್ನೂ ಗುರುಗಳನ್ನೂ ಬಿಟ್ಟು ಹೋಗುವುದಕ್ಕೆ ಒಲ್ಲದವನಾದನು. ಆಗ ಜಾತವೇದ ಮುನಿಗಳು ಬಸವಣ್ಣನಿಗೆ ಹೀಗೆ ಹೇಳಿದರು.

" ಬಸವಣ್ಣಾ ! ಜ್ಞಾನಿಯಾದವನು ತಾನೊಬ್ಬನೆ ಉದ್ಧಾರ ಹೊಂದುವುದಕ್ಕೆ ಹವಣಿಸುತ್ತಿರುವುದಿಲ್ಲ. ತನ್ನವರನ್ನೂ ತನ್ನ ಜೊತೆಯವರನ್ನೂ ಉದ್ಧಾರದ ದಾರಿಗೆ ಹಚ್ಚುವುದರಲ್ಲಿಯೇ ತನ್ನ ಜೀವನದ ಸಾರ್ಥಕತೆಯಿದೆ-ಯೆಂದು ಭಾವಿಸುತ್ತಾನೆ. ನೀನು ಇಲ್ಲಿರುವುದಕ್ಕಿಂತಲೂ ಜನರಿಂದ ತುಂಬಿರುವ ರಾಜಧಾನಿಗೆ ಹೋಗುವುದೆ ಲೇಸು. ಸಂಗಮನಾಥನು ನಿನಗೆ ಕೊಟ್ಟಿರುವ ಸಂದೇಶವನ್ನು ಹಬ್ಬಿಸುವುದಕ್ಕೆ ಅದೇ ಅನುಕೂಲವಾದ ಸ್ಥಳವು. ನೀನು ಬಲದೇವನ ಬಿನ್ನಹದಂತೆ ಕಲ್ಯಾಣಕ್ಕೆ ಹೊರಟುಬಿಡು. ಗಂಗಾಂಬಿಕೆಯನ್ನು ಮದುವೆ ಮಾಡಿಕೊಂಡು ಸದ್ಗೃ-

ಹಸ್ತನಾಗಿದ್ದುಕೊಂಡು, ಸಮಾಜೋದ್ಧಾರದ ಕಾರ್ಯವನ್ನು ನೆರವೇರಿಸು. ”

ಗುರುಗಳ ಮಾತಿನ ತಿರುಳನ್ನರಿತ ಬಸವಣ್ಣನು ಯಾವ ಮರುಮಾತನ್ನೂ ಹೇಳದೆ ಬಂದಿದ್ದ ಕುದುರೆ-ಯಾಳುಗಳೊಂದಿಗೆ ರಾಜಧಾನಿಗೆ ಹೊರಟು ಬಂದನು. ಬಲದೇವನು ಬಹಳ ಆನಂದದಿಂದ ಅಳಿಯನನ್ನು ಬರಮಾಡಿಕೊಂಡನು. ಶುಭಮುಹೂರ್ತದಲ್ಲಿ ಬಸವೇಶ್ವರ ಗಂಗಾಂಬಿಕೆಯರ ಮದುವೆಯು ಸಮಾರಂಭವು ವೈಭವದಿಂದ ಜರುಗಿತು. ಬಲದೇವನಿಗಾದ ಆನಂದಕ್ಕೆ ಅಳ-ತೆಯೆ ಇರಲಿಲ್ಲ.

---

## ೮ ಕರಣಿಕನಾದ

ಇನ್ನೊಬ್ಬರ ಪರಿಶ್ರಮದ ಫಲದಿಂದ ತನ್ನ ಬಾಳುವೆಯನ್ನು ಸಾಗಿಸಬಾರದೆಂಬುದು ಬಸವಣ್ಣನ ಪ್ರತಿಜ್ಞೆ. ಬಲ-ದೇವನ ಮನೆ ಅಳಿಯನಾಗಿದ್ದರೆ ಆತನು ಬೇಕಾದ ಹಾಗೆ ಸುಖದಿಂದ ಇರಬಹುದಾಗಿದ್ದಿತು. ಆದರೆ ಬಸವಣ್ಣನಿಗೆ ಅದು ಬೇಡವಾಯಿತು. ತನ್ನ ಸಂಸಾರಕ್ಕಾಗಿ ತಾನೇ ದುಡಿದು ತರಬೇಕೆಂದು ಅವನು ಅಪೇಕ್ಷಿಸಿದ. ತನ್ನ ಶೀಲಕ್ಕೊಪ್ಪು-ವಂತಹ ಕೆಲಸವೊಂದನ್ನು ಹುಡುಕಲು ತೊಡಗಿದ.

ಒಂದು ದಿನ ಅರಮನೆಯ ಆಯವ್ಯಯದ ಲೆಕ್ಕ-ದಲ್ಲಿ ಅದೇನೊ ತಪ್ಪು ಉಂಟಾಗಿದ್ದಿತು. ಬರೆಯುವ ಕರಣಿಕರೆಲ್ಲರೂ ತಲೆಗೆ ತಲೆ ಹಚ್ಚಿಕೊಂಡು ಕುಳಿತಿದ್ದರು. ಎಷ್ಟು ಹೊತ್ತಾದರೂ ಯಾರಿಗೂ ಅದರ ನೆಲೆ ದೊರೆ-ಯಲಿಲ್ಲ. ಕೆಲಸ ಹುಡುಕುವುದರಲ್ಲಿದ್ದ ಬಸವಣ್ಣನು ಅಂದು ಅಲ್ಲಿಗೆ ಬಂದಿದ್ದ. ಕರಣಿಕರೆಲ್ಲರ ಮಿಡುಕಾಟ-ವನ್ನು ನೋಡಿದ. “ಇಲ್ಲಿ ಕೊಡುತ್ತೀರಾ? ನಾನು ಸ್ವಲ್ಪ ಲೆಕ್ಕವನ್ನು ನೋಡುತ್ತೇನೆ” ಎಂದು ನುಡಿದ. ಅಲ್ಲಿ ಕುಳಿತಿದ್ದ ಕರಣಿಕರೆಲ್ಲರೂ ನಕ್ಕುಬಿಟ್ಟರು. “ಇಷ್ಟು ದಿನ ಕೆಲಸ ಮಾಡಿ ಅನುಭವವಿದ್ದವರು ನಾವು; ಅದೆಷ್ಟೋ ಹೊತ್ತಿನಿಂದ ಪೇಚಾಡುತ್ತಿದ್ದೇವೆ. ಇವನೇನು ನೋಡುತ್ತಾನೋ” ಎಂದು ಅಣಕದ ಮಾತನಾಡಿದರು.

ಬಸವಣ್ಣನು ಅಷ್ಟಕ್ಕೆ ಬಿಡಲಿಲ್ಲ. ಲೆಕ್ಕದ ಹೊತ್ತಿಗೆಯನ್ನು ಕೈಗೆ ತೆಗೆದುಕೊಂಡು ಅತ್ತಿತ್ತ ನೋಡಿದ. ಸ್ವಲ್ಪ ವೇಳೆಯಲ್ಲಿಯೆ ಲೆಕ್ಕದಲ್ಲಾದ ತಪ್ಪನ್ನು ತೋರಿಸಿ-ಕೊಟ್ಟ. ಎಲ್ಲರಿಗೂ ಆಶ್ಚರ್ಯವಾಯಿತು. ಬಸವಣ್ಣನ ಲೆಕ್ಕದಲ್ಲಿಯ ಚುರುಕುತನವನ್ನು ಎಲ್ಲರೂ ಕೊಂಡಾಡಿ-ದರು. ಈ ವರ್ತಮಾನವು ದೊರೆಯಾದ ಬಿಜ್ಜಳನಿಗೆ ತಿಳಿಯಿತು. ಆತನು ಬಸವಣ್ಣನನ್ನು ಕರೆಯಿಸಿಕೊಂಡು ಮರ್ಯಾದೆ ಮಾಡಿದನು. ಎಲ್ಲ ಕರಣಿಕರ ಮೇಲಿನ

ಹಿರಿಯ ಕರಣಿಕನ ಕೆಲಸಕ್ಕೆ ಆತನನ್ನು ನಿಯಮಿಸಿ-
ಕೊಂಡನು.

---

## ೯ ನಂಬುಗೆಯ ಪರೀಕ್ಷೆ

ಬಸವಣ್ಣನ ತ್ಯಾಗಬುದ್ಧಿ ಅಸಮಾನವಾದುದು.
ಆತನಿಗೆ ತನ್ನ ಹೊಟ್ಟೆ ಬಟ್ಟೆಯ ಚಿಂತೆಯಿರಲಿಲ್ಲ; ಸಂಸಾರ
ಸೌಖ್ಯದ ಆಸೆಯಿರಲಿಲ್ಲ. ಯಾವಾಗಲೂ ಸಮಾಜದ
ಉದ್ಧಾರದ ಹಂಬಲು; ಎಂತಲೆ ಅನೇಕ ಜನ ಸಾಧು-
ಸತ್ಪುರುಷರನ್ನು ತನ್ನಲ್ಲಿಗೆ ಬರಮಾಡಿಕೊಳ್ಳುವನು.
ಅವರ ಸೇವೆಗಾಗಿ ತನ್ನ ಸಂಪಾದನೆಯೆಲ್ಲವನ್ನೂ ಒಪ್ಪಿ-
ಸುವನು. ಅವರಿಂದ ಜನರಿಗೆ ಸದ್ಧರ್ಮಸದಾಚಾರಗಳ
ಬಗೆಗೆ ಉಪದೇಶ ಕೊಡಿಸುವನು. ಈ ಕಾರ್‍ಯಕ್ಕಾಗಿ ತನಗೆ
ಎಷ್ಟೊಂದು ಕಷ್ಟಗಳೊದಗಿದರೂ ಅವುಗಳನ್ನು ಗಣನೆಗೆ
ತಾರನು. ಸಮಾಜಕ್ಕೆ ಉಪಕಾರಿಯಾದ ಬಸವಣ್ಣನ
ಒಳ್ಳೆಯ ಕಾರ್‍ಯಗಳ ವರ್ತಮಾನವು, ದಿನಕ್ಕೊಂದೊಂದು
ಚೆಂದದಿಂದ ದೇಶದಲ್ಲಿ ಹಬ್ಬಲುತೊಡಗಿತು. ಇದರಿಂದ
ಬಿಜ್ಜಳರಾಜನಿಗೂ ತುಂಬ ಅಭಿಮಾನವೆನಿಸಿತು.

ಆದರೆ ಬಸವಣ್ಣನ ಕೀರ್ತಿಯು ಇನ್ನುಳಿದ ಅಧಿ-
ಕಾರಿಗಳ ಎದೆಗೆ ಮುಳ್ಳಾಗಿ ಪರಿಣಮಿಸಿತು. ಅವರು

ಹೊಟ್ಟೆಕಿಚ್ಚಿನಿಂದ ದೊರೆಯ ಬಳಿಗೆ ಹೋಗಿ ಚಾಡಿ-
ಯನ್ನು ಹೇಳಿದರು:—

"ದೊರೆಗಳು ಎಂತವನನ್ನೊ ತಂದು ಹಿರಿಯ ಕರಣಿಕನನ್ನಾಗಿ ಮಾಡಿದ್ದಾರೆ. ಬಸವನು ತನ್ನ ಕೀರ್ತಿಯ ಆಸೆಯಿಂದ ಬೊಕ್ಕಸವನ್ನೆಲ್ಲ ಬರಿಯದನ್ನಾಗಿ ಮಾಡು-ತಲಿದ್ದಾನೆ. ದೊರೆಗಳ ಲಕ್ಷ್ಯವು ಅದರ ಕಡೆಗೆ ಇಲ್ಲವೇ ಇಲ್ಲ. ನೋಡುವುದಿಲ್ಲವೆ! ಸಾಧುಸಂತರ ಸೋಗು ಹಾಕಿಕೊಂಡು ಸೋಮಾರಿ ಜನರು ದಿನದಿನವೂ ಹಿಂಡು-ಗಟ್ಟಿಕೊಂಡು ರಾಜಧಾನಿಗೆ ಬರುತಲಿದ್ದಾರೆ. ಅವರೆ-ಲ್ಲರೂ ದೊರೆಗಳ ಅನ್ನನೀರುಗಳಿಂದ ಕೊಬ್ಬಿ ಕೊನರು-ತ್ತಾರೆ; ಆದರೆ ಬಸವನ ಕೀರ್ತಿಯನ್ನು ಕೊಂಡಾಡುತ್ತ ಹೋಗುತ್ತಾರೆ. ಹೀಗಾದರೆ ರಾಜ್ಯದ ಗತಿಯು ಏನಾಗಬೇಕು?"

ಬಿಜ್ಜಳನು ಕರಣಿಕರ ಮಾತುಗಳನ್ನು ಕೇಳಿದ. ಕೂಡಲೆ ಬಸವಣ್ಣನನ್ನು ಕರೆಯಿಸಿದ. ಎಲ್ಲ ಲೆಕ್ಕದ ಹೊತ್ತಿಗೆಗಳನ್ನೂ ತೆಗೆಯಲಿಕ್ಕೆ ಹೇಳಿದ. ತನಗೆ ದೂರನ್ನು ಹೇಳಿದ ಕರಣಿಕರಿಂದಲೇ ಲೆಕ್ಕದ ಎಲ್ಲ ಅಂಕೆಗಳನ್ನೂ ಒರೆಗೆ ಹಚ್ಚಿ ಹಚ್ಚಿ ನೋಡಿಸಿದ. ಕಾಸುಕಾಸಿನ ಲೆಕ್ಕವೂ ಸರಿಯಾಗಿದ್ದಿತು. ಕರಣಿಕರು ತಮ್ಮ ಒಣಗಿ ಹೋದ ಮುಖಗಳನ್ನು ಕೆಳಕ್ಕೆ ಹಾಕಿದರು. ವಿರೋಧಿ-ಗಳಿಗೂ ತಪ್ಪು ತೆಗೆಯಲು ಬಾರದಂತೆ ಸರಿಯಾಗಿ ಲೆಕ್ಕ-

ವನ್ನಿಟ್ಟ ಬಸವಣ್ಣನಲ್ಲಿ ಬಿಜ್ಜಳನು ಇನ್ನಿಷ್ಟು ನಂಬುಗೆಯು-
ನ್ನಿಟ್ಟ. ಅವನ ಸಂಬಳವನ್ನೂ ಹೆಚ್ಚಿಸಿದ.

---

## ೧೦ ಮಂತ್ರಿಯಾದ

ಬಸವಣ್ಣ ಗಂಗಾಂಬಿಕೆಯರ ಬಾಳುವೆಯು
ಲೋಕದ ಜನರಿಗೆ ಆದರ್ಶವಾಗುವಂತೆ ಸಾಗಿದ್ದಿತು.
ಮುಂದೆ ಕೆಲವು ದಿನಗಳಲ್ಲಿಯೆ ಮಂತ್ರಿಯಾದ ಬಲ-
ದೇವನು ಕಾಲವಶನಾದನು. ಒಂದು ರಾಜ್ಯದ ಮಂತ್ರಿ-
ಯಾಗಿದ್ದವನು, ಆತನ ಸಂಪತ್ತು ಎಷ್ಟಿರಬೇಡ! ಅಳಿಯ
ನಾದ ಬಸವಣ್ಣನ ಹೊರತು ಆತನ ಆಸ್ತಿಗೆ ಬೇರೆ ಅಧಿ-
ಕಾರಿಗಳಾರೂ ಇರಲಿಲ್ಲ. ಮನಸು ಮಾಡಿದ್ದರೆ ಬಸವ-
ಣ್ಣನು ಮಾವನ ಸಂಪತ್ತಿನಿಂದ ಬೇಕಾದ ಹಾಗೆ ಲೋಲಾಡ
ಬಹುದಾಗಿದ್ದಿತು; ಆದರೇನು! ಅದೆಲ್ಲವೂ ಇನ್ನೊಬ್ಬರ
ದುಡಿತದ ಫಲವಲ್ಲವೆ! ಬಸವಣ್ಣನು ಬಲದೇವನದೊಂದು
ಕುರುಡುಕವಡೆಯನ್ನೂ ಮುಟ್ಟಲಿಲ್ಲ.

ಬಲದೇವನ ತರುವಾಯ ರಾಜ್ಯಕ್ಕೆ ಮಂತ್ರಿಯೊ-
ಬ್ಬನು ಬೇಕಾದನಲ್ಲವೆ! ಬಿಜ್ಜಳರಾಜನು ಆ ಸ್ಥಳಕ್ಕಾಗಿ
ಯಾರನ್ನು ಆರಿಸಬೇಕೆಂಬ ಯೋಚನೆಯಲ್ಲಿದ್ದನು.

ಮಂತ್ರಿಪದಕ್ಕೆ ಬಸವಣ್ಣನೆ ತಕ್ಕವನೆಂದು ಆಗಾಗ ಆತನ ಮನಸು ಹೇಳುತಿದ್ದಿತು.

ಅರಮನೆಯಲ್ಲಿಯ ಹಳೆಯ ಕಾಗದಪತ್ರಗಳನ್ನು ಶೋಧಿಸುತಿರುವಾಗ ವಿಚಿತ್ರವಾದ ಬರೆಹವೊಂದು ದೊರೆಯಿತು. ಆ ಬರೆಹದಲ್ಲಿಯ ಅಕ್ಷರಗಳನ್ನು ಓದುವುದು ಯಾರಿಂದಲೂ ಆಗಲಿಲ್ಲ. ಅನೇಕ ಭಾಷೆ ಅನೇಕ ಲಿಪಿಗಳ ಪರಿಚಯವುಳ್ಳ ಬಸವಣ್ಣನು ಗಡಗಡನೆ ಅದನ್ನು ಓದಿಬಿಟ್ಟನು. ಆ ಬರೆಹವು ಮೊದಲಿನ ದೊರೆಗಳಾದ ಚಾಲುಕ್ಯರಿಗೆ ಸಂಬಂಧಪಟ್ಟದು. ಚಾಲುಕ್ಯ ಮನೆತನದವರು ಭೂಮಿಯಲ್ಲಿ ಹೂತಿಟ್ಟ ದ್ರವ್ಯವು ಈ ಬರೆಹದ ಮೂಲಕವಾಗಿ ಬಿಜ್ಜಳನಿಗೆ ದೊರೆಯಿತು. ಬಸವಣ್ಣನಲ್ಲಿ ಬಿಜ್ಜಳನ ವಿಶ್ವಾಸವು ಇನ್ನೂ ಹೆಚ್ಚಾಯಿತು. ಮಂತ್ರಿಪದಕ್ಕೆ ಆತನನ್ನೇ ನಿಯಮಿಸಿಕೊಂಡನು.

ಬಸವಣ್ಣನನ್ನು ತಮ್ಮವನನ್ನಾಗಿ ಮಾಡಿಕೊಳ್ಳಬೇಕೆಂದು ಅಪೇಕ್ಷಿಸುವವರು ಅನೇಕರು. ಅದುದರಿಂದಲೇ ಬಿಜ್ಜಳನ ದಂಡನಾಯಕನಾದ ಸಿದ್ಧರಸನು, ತನ್ನ ಮಗಳಾದ ನೀಲಾಂಬಿಕೆಯನ್ನು ಬಸವಣ್ಣನಿಗೆ ಕೊಡುವುದಾಗಿ ಕೋರಿದನು. ತನ್ನ ಮನದಾಸೆಯನ್ನು ಬಸವಣ್ಣನಿಗೆ ತಿಳುಹಿಸಿ, ಮಗಳನ್ನು ಕೊಟ್ಟು ಮದುವೆ ಮಾಡಿದನು. ಬಸವಣ್ಣನ ದೃಷ್ಟಿಯಿಂದ ನೋಡಿದರೆ,

ಜಗತ್ತಿನ ಜೀವಜಂಗುಳಿಯೆಲ್ಲವೂ ಆತನ ಬಳಗವೇ ಆಗಿ-
ದ್ದಿತೆಂದು ಸಿದ್ಧರಸನೇನು ಬಲ್ಲನು ?

## ೧೧ ರಾಜಕಾರಣ

ತಾನು ಮುಂದೆ ಮಾಡಬೇಕಾಗಿದ್ದ ಸಮಾಜೋ-
ದ್ಧಾರದ ಕಾರ್ಯವನ್ನು ಮನದೆದುರಿಗೆ ತಂದು, ಬಸವಣ್ಣನು
ಮಂತ್ರಿಯಾಗಲಿಕ್ಕೆ ಸಮ್ಮತಿಸಿದ. ಆತನ ವ್ಯವಸ್ಥಿತ
ವಾದ ಆಡಳಿತದಿಂದ ದಿನದಿನಕ್ಕೂ ಪ್ರಜೆಗಳಲ್ಲಿ ಸುಖ-
ಸಮಾಧಾನಗಳು ನೆಲಸಲು ತೊಡಗಿದುವು. ಎಲ್ಲ ಜನ-
ರಿಗೂ ತಮ್ಮ ತಮ್ಮ ಕರ್ತವ್ಯದ ವಿಷಯದಲ್ಲಿ ಎಚ್ಚರಿಕೆ
ಯುಂಟಾಯಿತು.

ರಾಜಕಾರಣದಲ್ಲಿ ಬಸವಣ್ಣನ ಕೈಯನ್ನು ಹಿಡಿಯು
ವವರೆ ಇರಲಿಲ್ಲ. ರಾಜ್ಯದ ರಥವು ಸುಸೂತ್ರವಾಗಿ
ನಡೆಯುವಂತೆ ಬೇರೆ ಬೇರೆ ಅಧಿಕಾರಗಳಲ್ಲಿ ಯೋಗ್ಯ
ರಾದ ಜನರನ್ನು ನಿಯಮಿಸಿದನು. ಹಗೆಗಳು ರಾಜ್ಯ
ದೊಳಕ್ಕೆ ನುಗ್ಗದಂತೆ ಗಡಿಯ ಕೋಟೆಗಳನ್ನು ಗಟ್ಟಿಗೊಳಿ-
ಸಿದನು. ಪ್ರಜೆಗಳಿಗೆ ಭಾರವಾಗದಂತೆಯೂ ಆಡಳಿತದ
ವೆಚ್ಚಕ್ಕೆ ಸಾಲುವಂತೆಯೂ ತೆರಿಗೆಯ ಪದ್ಧತಿಯನ್ನು
ಪ್ರಚಾರದಲ್ಲಿ ತಂದನು. ಕೆರೆ ಕಾಲುವೆಗಳನ್ನು ಕಟ್ಟಿಸಿ



ದಂಡನಾಯಕ ಬಸವಣ್ಣನವರು

ಕೊಟ್ಟು ಒಕ್ಕಲುತನವು ಬೆಳೆಯುವಂತೆ ಮಾಡಿದನು. ದುರ್ಜನರಿಂದ ಸಜ್ಜನರಿಗೆ ತೊಂದರೆಯಾಗದಂತೆ ಅಲ್ಲಲ್ಲಿ ಕಟ್ಟೆಕಾವಲಿಗರನ್ನು ಇರಿಸಿದನು. ವ್ಯಾಪಾರವು ಸುರಕ್ಷಿತವಾಗಿ ಸಾಗುವಂತೆ, ದಾರಿಗುಂಟ ಮರಗಳು, ಅಲ್ಲಲ್ಲಿ ಕೆರೆಬಾವಿಗಳು, ಅನ್ನಸತ್ರಗಳು. ಒಂದೇ ಮಾತಿನಲ್ಲಿ ಹೇಳುವುದೆಂದರೆ ರಾಜ್ಯದಲ್ಲಿಯ ಜನರೆಲ್ಲರೂ ಸುಖವಾಗಿರುವುದಕ್ಕೆ ಯಾವ ಯಾವ ಅನುಕೂಲತೆಗಳು ಬೇಕೊ ಅವುಗಳನ್ನೆಲ್ಲ ಬಸವಣ್ಣನು ಏರ್ಪಡಿಸಿ ಕೊಟ್ಟನು. ತನ್ನ ವ್ಯವಹಾರಬುದ್ಧಿಯ ಮಾದರಿಯನ್ನು ಈ ಲೋಕಕ್ಕೆ ತೋರಿಸಿದನು.

ಅನೇಕ ಜನರಿಗೆ ಬಸಣ್ಣನ ಏಳಿಗೆಯು ಸಹನವಾಗಲಿಲ್ಲ. ಅವರು ಆಗಾಗ ಬಂದು, ಬಿಜ್ಜಳನೆದುರು ಏನೇನಾದರೂ ಚಾಡಿಯನ್ನು ಹೇಳುವರು. ಪರೀಕ್ಷೆಯು ಕೊನೆಯಲ್ಲಿ ಸತ್ಯವು ಹೊರಬಿದ್ದು, ಚಾಡಿಗಾರರು ನಾಚಿಕೆಯಿಂದ ತಲೆತಗ್ಗಿಸಬೇಕಾಗುತ್ತಿದ್ದಿತು. ಸ್ವಾರ್ಥವೊಂದು ಇಲ್ಲದಿದ್ದರೆ ಮನುಷ್ಯನು ಅಸತ್ಯದ ದಾರಿಯನ್ನು ಹಿಡಿಯುವನಾದರೂ ಏತಕ್ಕೆ?

---

## ೧೨ ಶರಣರ ನೆರವಿ

ಬಸವಣ್ಣನ ಮಂತ್ರಿತ್ವದಿಂದ ರಾಜ್ಯದಲ್ಲಿ ಎಲ್ಲೆ-ಲ್ಲಿಯೂ ಸುಖಸಮಾಧಾನಗಳು ನೆಲೆಗೊಂಡವು. ಜನರೆಲ್ಲರೂ ತಮ್ಮ ತಮ್ಮ ಕರ್ತವ್ಯಗಳಲ್ಲಿ ನಿರತರಾಗಿ ಎಂತಹದೂ ಹೆದರಿಕೆ–ಬೆದರಿಕೆಗಳಿಲ್ಲದೆ ಇರುತ್ತಿದ್ದರು.

ಬಸವಣ್ಣನಿಗೆ ಮುಖ್ಯವಾಗಿ ಬೇಕಾದುದೆಂದರೆ, ಸಮಾಜದ ಹೃದಯವನ್ನು ತಿದ್ದುವುದು. ಅದರಲ್ಲಿ ತಾನು ಕಂಡುಂಡ ಅಧ್ಯಾತ್ಮಿಕ ಅನುಭವದ ಬೀಜವನ್ನು ಬಿತ್ತಿ, ಬೆಳೆಯನ್ನು ಪಡೆಯುವುದು. ಮಂತ್ರಿಪದದಲ್ಲಿದ್ದು-ಕೊಂಡು ತನ್ನ ಉದ್ದೇಶಕ್ಕೆ ತಕ್ಕುದಾದ ವಾತಾವರಣ-ವನ್ನು ನಿರ್ಮಾಣಮಾಡಿಕೊಂಡನು. ಜನರೆಲ್ಲರ ಲಕ್ಷ್ಯ-ವನ್ನೂ ತನ್ನ ಕಡೆಗೆ ಸೆಳೆದುಕೊಳ್ಳುವಂತೆ ಅನೇಕ ಪವಾಡ-ಗಳನ್ನು ಮಾಡಿತೋರಿಸಿದನು. ಆ ಮೇಲೆ ಸಂಗಮೇಶ್ವರನ ದಯೆಯಿಂದ ತಾನು ಕಂಡುಕೊಂಡ ಹೊಸ ದಾರಿಯ ಗುರುತನ್ನು ಸಮಾಜಕ್ಕೆ ಮಾಡಿಕೊಡಲು ತೊಡಗಿದನು.

ಬಸವಣ್ಣನ ಕಾರ್ಯದಲ್ಲಿ ಗಂಗಾಂಬಿಕೆ ನೀಲಾಂಬಿಕೆ ಯರಿಬ್ಬರೂ ಅನುಕೂಲೆಯರಾಗಿದ್ದರು. ಅಲ್ಲದೆ ಬಸವ-ಣ್ಣನ ಸೋದರಳಿಯನಾದ ಚೆನ್ನಬಸವಣ್ಣನೂ ಸಮಾಜೋ-ದ್ಧಾರದ ಕಾರ್ಯಕ್ಕೆ ಸಹಾಯಕನಾಗಿ ನಿಂತ. ಬಸವಣ್ಣನ ಕೀರ್ತಿ ದಿಕ್ಕುದಿಕ್ಕಿಗೂ ಹಬ್ಬಿತು. ಬನವಸೆಯಿಂದ ಅಲ್ಲಮ

ಪ್ರಭು ಬಂದ. ಉಡುತಡಿಯಿಂದ ಮಹಾದೇವಿಯಕ್ಕ ಬಂದಳು. ಸೊನ್ನಲಾಪುರದಿಂದ ಸಿದ್ಧರಾಮೇಶ್ವರ ಬಂದ. ಅಲ್ಲದೆ ಮಡಿವಳ ಮಾಚಯ್ಯ, ಹಡಪದ ಅಣ್ಣಪ್ಪ, ಅಂಬಿಗರ ಚೌಡಯ್ಯ, ಡೋಹರ ಕಕ್ಕಯ್ಯ ಮೊದಲಾದವರೂ ಬಂದು ಕಲ್ಯಾಣದಲ್ಲಿ ನೆಲಸಿದರು. ಎಲ್ಲರೂ ಜ್ಞಾನಿಗಳು. ಹಳೆಯ ಧಾರ್ಮಿಕ ಆಚಾರಗಳಲ್ಲಿಯ ಕೊಳೆಯನ್ನ ಕಂಡು ಬೇಸತ್ತವರು. ಜನರನ್ನು ನಿಜವಾದ ಸದಾಚಾರದ ದಾರಿಯಿಂದ ಕರೆದುಕೊಂಡು ಹೋಗಬೇಕೆಂದು ಹವಣಿಸುವವರು. ಬಸವಣ್ಣನು ಹದಮಾಡಿಟ್ಟ ಕ್ಷೇತ್ರದಲ್ಲಿ ಈ ಎಲ್ಲ ಮಹಾಪುರುಷರೂ ತಮ್ಮ ಅನುಭವವನ್ನು ಬಿತ್ತಿ ಬೆಳೆಯಲಿಕ್ಕೆಂದು ಕಲ್ಯಾಣಕ್ಕೆ ಬಂದರು. ಎಲ್ಲರೂ ಬಸವಣ್ಣನ ಮುಂದಾಳುತನವನ್ನೊಪ್ಪಿ ಕಾರ್ಯ ಮಾಡಲು ತೊಡಗಿದರು.

## ೧೩ ಬಸವಣ್ಣನ ಉಪದೇಶ

"ಯಜ್ಞಯಾಗಗಳ ಮೂಲಕ ನಡೆಯುತಿರುವ ಹಿಂಸೆಯು ನಿಂತು ಹೋಗಬೇಕು. ಕೃತ್ರಿಮ ಮಡಿಮೈಲಿಗೆಗಳ ಗೊಂದಲವು ಅಡಗಬೇಕು. ಎಲ್ಲ ಜನರ ಧಾರ್ಮಿಕ ಆಚಾರಗಳೂ ಒಂದೇ ರೀತಿಯವಾಗಿರಬೇಕು.

ಎಲ್ಲರೂ ಒಬ್ಬನೇ ದೇವನನ್ನು ಆರಾಧಿಸಬೇಕು. ಬೇರೆ ಬೇರೆ ಜಾತಿಗಳ ಕಟ್ಟುಕಟ್ಟಳೆಗಳು ಹೋಗಿ, ಎಲ್ಲ ಜನರೂ ತಮ್ಮತಮ್ಮಲ್ಲಿ ಹೊಕ್ಕು ಬಳಕೆಯನ್ನು ಮಾಡಬೇಕು, ಹೆಣ್ಣು ಗಂಡು ಕೊಳ್ಳಬೇಕು ಕೊಡಬೇಕು." ಇತ್ಯಾದಿಯಾಗಿ ಬಸವಣ್ಣನೂ ಆತನ ಅನುಯಾಯಿಗಳೂ ಎಣಿಕೆ ಹಾಕಿದರು. ಶ್ರುತಿಸ್ಮೃತಿಗಳಲ್ಲಿ ಹೇಳಿದಂತೆ ವರ್ಣಾಶ್ರಮ ಧರ್ಮಗಳ ಪಾಲನೆಯು ಈ ಕಾಲದಲ್ಲಿ ಆವಶ್ಯಕವಿಲ್ಲವೆಂದು ಭಾವಿಸಿದರು.

ಬಸವಣ್ಣನು ಜನರಿಗೆ ಮಾಡಿದ ಉಪದೇಶವೇನೆಂದರೆ:– ಒಬ್ಬನೇ ದೇವರು; ಅವನಲ್ಲಿ ಸಂಪೂರ್ಣವಾಗಿ ನಂಬುಗೆಯನ್ನಿಡಬೇಕು. ದೇವನ ಭಕ್ತರೇ ಜಂಗಮರು; ಅವರ ಸೇವೆಗಾಗಿಯೆ ಹಗಲಿರುಳು ದುಡಿಯುತಿರಬೇಕು. ಸನ್ಯಾಸಿಯಾಗಿ ಕಾಡನ್ನು ಸೇರಬಾರದು. ಜನಸೇವೆಯಲ್ಲಿಯೆ ಜನುಮ ಸವೆಯಿಸಬೇಕು. ಭಿಕ್ಷೆ ಬೇಡುವುದು ಯೋಗ್ಯವಲ್ಲ. ಪ್ರತಿಯೊಬ್ಬನೂ ಬದುಕಿಕೊಂಡಿರುವುದಕ್ಕೆ ಯಾವುದಾದರೊಂದು ಕಾಯಕ (ಉದ್ಯೋಗ) ವನ್ನು ಕೈಕೊಳ್ಳಬೇಕು. ಯಾವ ಕಾಯಕವನ್ನೂ ಕೀಳೆಂದು ಗಣಿಸಲಾಗದು. ದೇವರ ಚಿಹ್ನವಾದ ಲಿಂಗವನ್ನು ಧರಿಸಿದವರೆಲ್ಲರೂ ಸಮಾನರು. ಸದಾಚಾರಿಗಳು ಯಾರಿದ್ದರೂ ಒಳ್ಳೆಯ ಕುಲದವರು. ದುರಾಚಾರಿಗಳು ಯಾವ ಜಾತಿ ಪಂಥದವರಾದರೂ ಹೊಲೆಯರು. ದೇವಭಕ್ತನು

ಷಟ್‌ಸ್ಥಲಜ್ಞಾನದ ಅನುಷ್ಠಾನದಿಂದ ಮೋಕ್ಷವನ್ನು ಪಡೆಯುವನು."

ಈ ಉಪದೇಶವು ಬಹು ಜನರ ಮನಸ್ಸು ಬುದ್ಧಿಗಳನ್ನು ಹೊಸ ವಿಚಾರಕ್ಕೆ ತೊಡಗಿಸಿತು. ದಿನ-ದಿನಕ್ಕೂ ಈ ಉಪದೇಶವು ಜನರನ್ನು ತನ್ನ ಕಡೆಗೆ ಸೆಳೆಯುತೊಗಿತು.

---

## ೧೪ ಉದಾರ ಬಸವಣ್ಣ

"ದಯೆಯೇ ಧರ್ಮದ ಮೂಲವಯ್ಯ" ಎಂಬುದು ಬಸವಣ್ಣನ ಉಪದೇಶದ ಮೂಲಮಂತ್ರ. ದಾನವೀಯದ ಧನಿಕರನ್ನು ಇವನು ತುಂಬ ಬೀಳುಗಳೆದಿರುವನು. "ಕಾಗೆ ಒಂದಗಳ ಕಂಡರೆ ಕರೆಯದೆ ತನ್ನ ಬಳಗವನೆಲ್ಲವನು? ಕೋಳಿ ಒಂದು ಗುಟುಕ ಕಂಡರೆ ಕರೆಯದೆ ತನ್ನ ಕುಲವನೆಲ್ಲವನು?" ಎಂಬ ಅವನ ಮಾತು ಏನು ಹೇಳುವುದು? ಶಿವಭಕ್ತನಾದವನು ತಾನೊಬ್ಬನೇ ತಿಂದು ತೇಗಿಕೊಂಡಿರದೆ, ಜನಸಮಾಜವೆಲ್ಲದರ ಹಿತವನ್ನೂ ಮಾಡು-ತಿರಬೇಕು— ಎಂದೇ ಅಲ್ಲವೇ?

ತಮಗಿಲ್ಲದ ವಸ್ತುವನ್ನು ಪಡೆಯಬೇಕೆಂಬ ಆಸೆಯುಂಟಾದರೆ, ಕಳವುಮಾಡಬೇಕೆಂಬ ಬುದ್ಧಿಯಾಗು-

ವುದು. ಆದರೆ ಜನರೆಲ್ಲರೂ ಸಮಾನಸ್ಥಿತಿಯುವರಿದ್ದಲ್ಲಿ, ಈ ಕಳವು ಸುಲಿಗೆಗಳು ಏತಕ್ಕೆ ಬರುವವು? ಈ ಮಾತನ್ನು ಬಸವಣ್ಣನು ತನ್ನ ಅನೇಕ ಆಚರಣೆಗಳಿಂದ ಸಿದ್ಧಮಾಡಿ ತೋರಿಸಿದ್ದಾನೆ.

ಒಂದು ರಾತ್ರಿಯಲ್ಲಿ ಕಳ್ಳನೊಬ್ಬನು ಬಸವಣ್ಣನ ಮನೆಯೊಳಕ್ಕೆ ಪ್ರವೇಶಿಸಿದ. ನೀಲಾಂಬಿಕೆಯು ಮೈ-ಮೇಲಿನ ಆಭರಣಗಳನ್ನು ತೆಗೆದುಕೊಳ್ಳುವ ಪ್ರಯತ್ನ-ದಲ್ಲಿದ್ದ. ಅಷ್ಟರಲ್ಲಿಯೆ ನೀಲಾಂಬಿಕೆಯು ಎಚ್ಚತ್ತು, ಬಸವಣ್ಣನನ್ನೂ ಎಚ್ಚರಿಸಿದಳು. ಆಗ ಬಸವಣ್ಣನು, "ಬಂದವನು ಕಳ್ಳನಲ್ಲ; ಸಂಗಮನಾಥನೆ ನನಗೆ ಬುದ್ಧಿಯನ್ನು ಕಲಿಸುವುದಕ್ಕಾಗಿ ಕಳ್ಳನಾಗಿ ಬಂದಿದ್ದಾನೆ. ನೀನು ಎಲ್ಲವನ್ನೂ ಆತನಿಗೆ ಕೊಟ್ಟುಬಿಡು" ಎಂದು ಹೆಂಡತಿಗೆ ಹೇಳಿದನು. ನೀಲಲೋಚನೆಯು ಒಂದೊಂದಾಗಿ ಆಭರಣ-ಗಳನ್ನು ಬಿಚ್ಚಿ, ಕಳ್ಳನ ಮುಂದೆ ಇರಿಸಲು ತೊಡಗಿದಳು. ಬಂದಿದ್ದ ಕಳ್ಳನಿಗೆ ಪಶ್ಚಾತ್ತಾಪವೆನಿಸಿತು. ಬಸವಣ್ಣನ ವಿಷಯದಲ್ಲಿ ಭಕ್ತಿಯುಂಟಾಯಿತು. ಅವನು ಕಾಲಿಗೆರಗಿ ಕ್ಷಮೆಯನ್ನು ಕೋರಿದನು. ಕಳವು ಮಾಡುವುದನ್ನು ಬಿಟ್ಟು ಬಸವಣ್ಣನ ಭಕ್ತನಾದನು.

ಇನ್ನೊಂದು ಸಲ ಬಸವಣ್ಣನ ಆಕಳ ಹಿಂಡು ಕಾಡಿಗೆ ಮೇಯಲು ಹೋದಾಗ, ತುಂಟರು ತೆಗೆದುಕೊಂಡು ಹೋದರು. ಗೋಪಾಲಕರು ಓಡಿಬಂದು, ಬಸವಣ್ಣನಿಗೆ

ಈ ಸಂಗತಿಯನ್ನು ತಿಳುಹಿಸಿದರು. ಆಗ ಬಸವಣ್ಣನು:-
" ತೆಗೆದುಕೊಂಡು ಹೋದರೇ? ಒಳ್ಳೆಯದಾಯಿತು.
ಆದರೆ ಆಕಳ ಕರುಗಳೆಲ್ಲ ಮನೆಯಲ್ಲಿಯೆ ಇವೆಯಲ್ಲವೇ!
ತಾಯಿಗಳನ್ನಗಲಿ ಅವು ಕಳವಳಗೊಳ್ಳುತಿರಬಹುದು.
ಕರುಗಳನ್ನೂ ತೆಗೆದುಕೊಂಡು ಹೋಗಿ ಕಳ್ಳರಿಗೆ ಒಪ್ಪಿಸಿ
ಬನ್ನಿರಿ." ಎಂದು ಹೇಳಿದನು. ಗೋಪಾಲಕರು ಬಸವ-
ಣ್ಣನ ಮಾತಿನಂತೆಯೆ ಕರುಗಳನ್ನೆಲ್ಲ ಹೊತ್ತುಕೊಂಡು
ಹೋಗಿ, ತುಂಟರಿಗೆ ಒಪ್ಪಿಸಿದರು. ಬಸವಣ್ಣನ ಈ ಬಗೆ
ಯನ್ನು ಕಂಡು ತುಂಟರು ಬೆರಗಾದರು. ಪಶ್ಚಾತ್ತಾಪ
ಹೊಂದಿದವರಾಗಿ ಬಸವಣ್ಣನ ಬಳಿಗೆ ಬಂದು, ಎಲ್ಲ
ಆಕಳುಗಳನ್ನೂ ಒಪ್ಪಿಸಿ, ಕ್ಷಮೆಬೇಡಿದರು.

---

## ೧೫ ಸಂಗಮನಾಥನಲ್ಲಿ ಒಂದಾದ

ಬಸವಣ್ಣನ ಸದಾಚರಣೆಯನ್ನು ನೋಡಿ, ಸದುಪ-
ದೇಶವನ್ನು ಕೇಳಿ, ಜನರು ಹಿಂಡುಹಿಂಡಾಗಿ ಆತನ ಮತ
ವನ್ನು ಅನುಸರಿಸತೊಡಗಿದರು. ಬ್ರಾಹ್ಮಣರು, ವೈಶ್ಯರು,
ಕ್ಷತ್ರಿಯರು, ಶೂದ್ರರು ಇತ್ಯಾದಿ ಎಲ್ಲ ಬಗೆಯ ಜನರೂ
ಬಸವಣ್ಣನನ್ನು ಹಿಂಬಾಲಿಸಲು ತೊಡಗಿದರು. ಮನೆಬಿಟ್ಟು
ಹೊರಬೀಳಲಿಕ್ಕೆ ಸ್ವಾತಂತ್ರ್ಯವಿಲ್ಲದ ಹೆಣ್ಣುಮಕ್ಕಳೂ

ಮುಂದುವರಿದು ಬಂದು, ಬಸವಣ್ಣನ ಉಪದೇಶವನ್ನು ಕೇಳುತಿದ್ದರು; ಬುದ್ಧಿಸಂಸ್ಕಾರವನ್ನು ಪಡೆಯುತಿದ್ದರು.

ಹಳೆಯದನ್ನೆ ಹಿಡಿದುಕೊಂಡು ಕುಳಿತ ಸಂಪ್ರದಾಯ-ಶರಣರಿಗೆ ಇದೆಲ್ಲವೂ ಸರಿಯೆನಿಸಲಿಲ್ಲ. ಅವರು ಬಸವಣ್ಣನನ್ನು ಬಗೆಬಗೆಯಾಗಿ ದೂರಲು ತೊಡಗಿದರು. ಅದರಲ್ಲಿಯೂ ಹರಳಯ್ಯನೆಂಬ ಮೊಚ್ಚೆಗಾರನ ಮಗನೊಡನೆ, ಮಧುವರಸನೆಂಬ ಬ್ರಾಹ್ಮಣನ ಮಗಳ ಮದುವೆಯಾದುದಂತೂ ಉರಿಯುಲ್ಲಿ ಹುಲ್ಲು ಹಾಕಿದಂತಾಯಿತು. ಈ ಬಗೆಯ ವ್ಯವಹಾರಗಳಿಗೆಲ್ಲ ಬಸವಣ್ಣನವರ ಸಮ್ಮತಿ-ಯಿದ್ದೇ ಇದ್ದಿತು. ಪ್ರಾಚೀನ ಧರ್ಮಾಭಿಮಾನಿಗಳೆಲ್ಲರೂ ಬಿಜ್ಜಳನ ಬಳಿಯಲ್ಲಿ, ಧರ್ಮಹಾನಿಯಾಗುತಿರುವುದೆಂದು ದೂರಿಕೊಂಡರು. ಮೊಚ್ಚೆಗಾರ–ಬ್ರಾಹ್ಮಣರಲ್ಲಿ ನಡೆದ ನೆಂಟುತನವು ಅವನಿಗೆ ಸಹನವಾಗಲಿಲ್ಲ. ಆದುದರಿಂದ ಹರಳಯ್ಯನಿಗೂ ಮಧುವರಸನಿಗೂ ಕಠಿನವಾದ ಶಿಕ್ಷೆಯನ್ನು ವಿಧಿಸಿದನು; ಅಲ್ಲದೆ ಬಸವೇಶ್ವರನ ಹೊಸ ಮತದ ಪ್ರಚಾರವನ್ನೆಲ್ಲ ತಪ್ಪೆಂದು ಭಾವಿಸಲು ತೊಡಗಿ-ದನು. ಸಮಾಜೋದ್ಧಾರವೆ ತನ್ನ ಕರ್ತವ್ಯವೆಂದು ತಿಳಿದ ಬಸವಣ್ಣನು: “ಇನ್ನು ಮೇಲೆ ನನ್ನ ಕಾರ್ಯಕ್ಕಿದು ತಕ್ಕ ಸ್ಥಳವಲ್ಲ! ದೇವರು ದೊರೆಗೆ ಒಳ್ಳೆಯ ಬುದ್ಧಿಯನ್ನು ಕೊಡಲಿ!” ಎಂದು ಯೋಚಿಸಿದನು; ಮಂತ್ರಿಪದವನ್ನು ಬಿಟ್ಟುಕೊಟ್ಟು, ಹೆಂಡಿರುಮಕ್ಕಳೊಂದಿಗೆ ಸಂಗಮನಾಥನ

ಲ್ಲಿಗೆ ಹೊರಟುಬಿಟ್ಟನು. ಚೆನ್ನಬಸವೇಶ್ವರನು ಉಳಿದ ಶರಣಸಮೂಹದೊಂದಿಗೆ ಉಳಿವೆಗೆ ಹೊರಟುಹೋದನು. ಬಸವಣ್ಣನು ಸಮಾಜದ ಸೇವೆಯೆ ಉಮಾಪತಿಯ ಸೇವೆಯೆಂದು ಭಾವಿಸಿದನು; ಅದರಲ್ಲಿಯೆ ಆಯುಷ್ಯವನ್ನು ಸವೆಯಿಸಿದನು; ಕೊನೆಗೆ ಸಂಗಮನಾಥನಲ್ಲಿ ಬೆರೆತು ಒಂದಾದನು.

---

## ೧೬ ಉಪಕಾರದ ನೆನಹು

ನಮ್ಮ ನಾಡಿಗೆ ಬಸವಣ್ಣನವರು ಮಾಡಿದ ಉಪಕಾರವು ಅಷ್ಟಿಷ್ಟಲ್ಲ. ಹಳ್ಳಿಹಳ್ಳಿಗಳಲ್ಲಿಯೂ ಹಿರಿಯ ಮಠಗಳನ್ನು ಸ್ಥಾಪಿಸಿ, ಅವುಗಳ ಮುಖಾಂತರವಾಗಿ ವಿದ್ಯಾದಾನವೂ ಅನ್ನದಾನವೂ ನಿರಂತರವಾಗಿ ನಡೆಯುವಂತೆ ಏರ್ಪಾಟು ಮಾಡಿದನು. ಮುಸುರೆ ಬಳಿಯಲಿಕ್ಕೆ ಮಾತ್ರ ಅಧಿಕಾರಿಗಳಾಗಿದ್ದ ಹೆಣ್ಣುಮಕ್ಕಳಲ್ಲಿಯೂ ವಿದ್ಯಾಪ್ರಸಾರವಾಗುವಂತೆ ಮಾಡಿ, ಅವರಿಂದ ಅನುಭವ-ರಸಾಯನವನ್ನು ಹೊರಹೊರಡಿಸಿದನು. ಜಾತಿಯ ಮೇಲು ಕೀಳುಗಳನ್ನು ಕಳೆದು ಹಾಕಿ "ಜಾತಿಯೊಂದೇ ಮಾನವ ಜಾತಿ" ಎಂಬುದನ್ನು ಹೇಳುವುದಕ್ಕೆ ಕೊನೆಯವರೆಗೆ ಹೆಣಗಿದನು.

ಕನ್ನಡ ಭಾಷೆಗೆ ಬಸವಣ್ಣನು ಕೊಟ್ಟಿರುವ ದಾನವು ಬಲು ಹೆಚ್ಚಿನದು. ಬಸವಣ್ಣನೂ ಇನ್ನುಳಿದ ಶಿವಶರಣರೂ ನಮ್ಮ ತಾಯುನುಡಿಯಲ್ಲಿಯ ಬಹುಭಾಗವನ್ನು ಅಂದ-ಗೊಳಿಸಿದ್ದಾರೆ. ಧಾರ್ಮಿಕ ಜೀವನದಲ್ಲಿ ಹೊಸತನವಿದ್ದಂತೆ, ಬಸವಣ್ಣನ ಭಾಷೆಯ ಮಾರ್ಗವೂ ಹೊಸಬಗೆಯದು. ಅವನ ವಚನ ಗ್ರಂಥಗಳ ಶೈಲಿಯು, ನಮ್ಮ ಹೊಸ ಕನ್ನಡ ನುಡಿಯ ಬೆಳವಣಿಗೆಯ ದಾರಿಗೆ ಬೆಳಕಾಗಿದೆ.

ನಮ್ಮ ಕನ್ನಡತಾಯಿ ಬಸವಣ್ಣನಂತಹ ಮಕ್ಕಳನ್ನು ಆಗಾಗ ಪಡೆಯಲಿ! ಕಗ್ಗತ್ತಲೆಯಲ್ಲಿ ತೊಳಲುತ್ತಲಿದ್ದ ನಮಗೆ ಬೆಳಕನ್ನು ತೋರಿಸಲಿ!

---

## ೧೭ ಬಸವಣ್ಣನ ಮುತ್ತಿನಂತಹ ಮಾತುಗಳು

೧ ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ! ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೆ ಮರ್ತ್ಯಲೋಕ! ಆಚಾರವೇ ಸ್ವರ್ಗ, ಅನಾಚಾರವೆ ನರಕ!

೨ ಪುಣ್ಯಪಾಪಂಗಳಿವು ತಮ್ಮ ಇಷ್ಟವು ಕಂಡಿರಯ್ಯಾ! ಅಯ್ಯ ಎಂದಡೆ ಸ್ವರ್ಗ, ಎಲವೋ ಎಂದಡೆ ನರಕ!

೩ ಮೃದುವಚನವೆ ಸಕಲ ಜಪಂಗಳಯ್ಯಾ! ಮೃದುವಚನವೆ ಸಕಲ ತಪಂಗಳಯ್ಯಾ !

೪ ದಯವಿಲ್ಲದ ಧರ್ಮವಾವುದಯ್ಯಾ! ದಯೆ ಬೇಕು ಸಕಲ ಪ್ರಾಣಿಗಳೆಲ್ಲರಲಿ! ದಯೆಯೆ ಧರ್ಮದ ಮೂಲವಯ್ಯಾ !

೫ ತನುವಿನ ಕೋಪ ತನ್ನ ಹಿರಿಯತನದ ಕೇಡು! ಮನದ ಕೋಪ ತನ್ನ ಅರುಹಿನ ಕೇಡು!

೬ ನುಡಿದು ಹುಸಿವ, ನಡೆದು ತಪ್ಪುವ, ಪ್ರಪಂಚಿಯನೊಲ್ಲ ನಮ್ಮ ಕೂಡಲಸಂಗಮದೇವ!

೭ ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ಮುನಿಯ ಬೇಡ, ಅನ್ಯರಿಗೆ ಅಸಹ್ಯಪಡಬೇಡ! ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ! ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ! ಇದೇ ನಮ್ಮ ಕೂಡಲಸಂಗಮದೇವನನೊಲಿಸುವ ಪರಿ!

೮ ಕೆಡೆ ನಡೆಯದೆ, ಕೆಡೆ ನುಡಿಯದೆ, ಅನ್ಯರ ಪ್ರತಿ-ಪಾದಿಸದಿದ್ದರೆ, ಏನ ಮಾಡನಯ್ಯ ಲಿಂಗವು? ಏನ ಕೊಡಸಯ್ಯ ಲಿಂಗವು?

೯ ನುಡಿಗೆ ತಕ್ಕ ನಡೆಯ ಕಂಡರೆ, ಕೂಡಲ ಸಂಗಮದೇವನೊಳಗಿಪ್ಪ ನೋಡಯ್ಯಾ!

೧೦ ತನ್ನಿಚ್ಛೆಯ ನುಡಿದರೆ ಮೆಚ್ಚುವುದೀಮನವು. ಇದಿರಿಚ್ಛೆಯ ನುಡಿದರೆ ಮೆಚ್ಚದೀಮನವು. ಕೂಡಲಸಂಗನ

ಶರಣರ ನೆಟ್ಟದ ಮೆಟ್ಟದ ಮನವ ಕಿಚ್ಚಿನೊಳಗಿಕ್ಕು!

೧೧ ಎನ್ನವಗುಣವೆಂಬ ಕಸವ ಕಿತ್ತು ಸಲಹಯ್ಯಾ, ಲಿಂಗ ತಂದೇ! ಸುಳಿದೆಗೆದು ಬೆಳೆವೆನು, ಕೂಡಲಸಂಗಮ ದೇವಾ!

೧೨ ಮಡಿಕೆಯು ಮಾಡುವರೆ ಮಣ್ಣೇ ಮೊದಲು; ತೊಡಿಗೆಯು ಮಾಡುವರೆ ಹೊನ್ನೇ ಮೊದಲು. ಶಿವಪಥವ ನರಿವಡೆ, ಗುರುಪಥವೆ ಮೊದಲು. ಕೂಡಲಸಂಗಮ ದೇವರನರಿವಡೆ, ಶರಣರ ಸಂಗವೆ ಮೊದಲು.

೧೩ ಅಂತರಂಗಶುದ್ಧವಿಲ್ಲದವರ ಸಂಗ, ಸಿಂಗಿ ಕಾಳ ಕೂಟವಿಷವು ಕೂಡಲಸಂಗಮದೇವಾ!

೧೪ ಗಿಳಿಯೋದಿ ಫಲವೇನು? ಬೆಕ್ಕುಬಹುದ ಹೇಳಲರಿಯದು; ಜಗವೆಲ್ಲ ಕಾಂಬ ಕಣ್ಣು ತನ್ನ ಕೊಂಬ ಕೊಯಿಲೆಯು ಕಾಣಲರಿಯದು; ಇದಿರ ಗುಣವ ಬಲ್ಲೆವೆಂಬರು ತಮ್ಮ ಗುಣವ ತಾವರಿಯರು.

೧೫ ಹೊಲೆಯು ಹೊಲಬಿಗನಾದರೆ ಅವನ ಹೊರೆಯಲಿಪ್ಪುದು ಲೇಸು ಕಂಡಿರಯ್ಯಾ!

೧೬ ದೂಷಕನೊಬ್ಬ ದೇಶವ ಕೊಟ್ಟಡೆಯೂ ಆಶೆ ಮಾಡಿ ಅವನ ಹೊರೆಯಲ್ಲಿರಬೇಡ!

೧೭ ಹಾವು ತಿಂದವರ ನುಡಿಸಬಹುದು; ಗರ ಹೊಡೆದವರ ನುಡಿಸಬಹುದು; ಸಿರಿಗರ ಹೊಡೆದವರ ನುಡಿಸಲು ಬಾರದು! ನೋಡಯ್ಯಾ ಬಡತನವೆಂಬ ಮಂತ್ರವಾದಿ

ಹೊಗಲು ಒಡನೆ ನುಡಿವರಯ್ಯಾ ಕೂಡಲಸಂಗಮದೇವಾ !

೧೮ ಮಾರಿ ಮಸಣಿ ಎಂಬವು ಬೇರಿಲ್ಲ ಕಾಣಿರೋ ! ಮಾರಿ ಎಂಬುದೇನು ? ಕಂಗಳು ತಪ್ಪಿ ನೋಡಿದರೆ ಮಾರಿ, ನಾಲಗೆ ತಪ್ಪಿ ನುಡಿದರೆ ಮಾರಿ ! ನಮ್ಮ ಕೂಡಲಸಂಗಯ್ಯನ ನೆನಹ ಮರೆದರೆ ಮಾರಿ !

೧೯ ಎರೆದರೆ ನೆನೆಯದು, ಮರೆದರೆ ಬಾಡದು, ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ. ಕೂಡಲಸಂಗಮದೇವ ! ಜಂಗಮಕ್ಕೆರೆದರೆ ಸ್ಥಾವರ ನೆನೆಯಿತ್ತು.

೨೦ ಕಲ್ಲನಾಗರ ಕಂಡರೆ ಹಾಲನೆರೆ ಎಂಬರು; ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ ! ಉಂಬ ಜಂಗಮ ಬಂದರೆ ನಡೆಯೆಂಬರು; ಉಣ್ಣದ ಲಿಂಗಕ್ಕೆ ಬೋನವ ಹಿಡಿವರಯ್ಯಾ !

೨೧ ಎನ್ನಿಂದಲೆ ಆಯಿತ್ತು, ಎನ್ನಿಂದಲೆ ಹೋಯಿತ್ತು–ಎಂಬವನ ಬಾಯಲ್ಲಿ ಮೆಟ್ಟಿ ಹುಡಿಯ ತುಂಬದೆ ಮಾಣ್ಬನೆ ನಮ್ಮ ಕೂಡಲಸಂಗಮದೇವ !

೨೨ ಉಟ್ಟುತೊಟ್ಟು ಪೂಜ್ಯನಾಗಿ ಬಂದ ಜಂಗಮ ವಿಶೇಷವೆಂದು ಕಂಡು, ಕಂತೆಬೊಂತೆಯ ಜಂಗಮ ಬಂದರೆ ಹೀನವೆಂದು ಕಂಡೆನಾದರೆ ಪಂಚಮಹಾಪಾತಕ !

೨೩ ನೀನೊಲಿದರೆ ಕೊರಡು ಕೊನರುವುದಯ್ಯಾ ! ನೀನೊಲಿದರೆ ಬರಡು ಹಯನಹುದಯ್ಯಾ ! ನೀನೊಲಿದರೆ

ವಿಷವು ಅಮೃತವಹುದಯ್ಯಾ! ನೀನೊಲಿದರೆ ಸಕಲ ಪಡಿಪದಾರ್ಥ ಇದಿರಲ್ಲಿಪ್ಪುವು ಕೂಡಲಸಂಗಮದೇವಾ!

೨೪ ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ; ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ. ಮಾಡುವ ನೀಡುವ ನಿಜಗುಣವುಳ್ಳರೆ ಕೂಡಿಕೊಂಬ ನಮ್ಮ ಕೂಡಲಸಂಗಮದೇವ!

೨೫ ಒಳಗುಹೊರಗು ಒಂದಾಗದವರಿಗೆ, ಅಳಿಯಾಸೆದೋರಿ ಬೀಸಾಡುವ ನಮ್ಮ ಕೂಡಲಸಂಗಮದೇವ.

೨೬ ಎಲ್ಲಿ ನೋಡಿದಡಲ್ಲಿ ಮನವನೆಳಸದಡೆ ಆಣೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಪರವಧುವನು ಮಹಾದೇವಿಯೆಂಬೆ ಕೂಡಲಸಂಗಮದೇವಾ!

೨೭ ಎನ್ನವರೊಲಿದು ಹೊನ್ನಶೂಲದಲಿಕ್ಕಿದರೆನ್ನ ಹೊಗಳಿ ಹೊಗಳಿ!

೨೮ ಕೂಡಲಸಂಗಮದೇವಾ! ನೀನೆನಗೊಳ್ಳಿದನಾದರೆ ನನ್ನ ಹೊಗಳತೆಗಡ್ಡಬಾರಾ!

೨೯ ಎನ್ನ ತಂದೆ ಕೂಡಲಸಂಗಮದೇವಾ! ನಿಮ್ಮ ಶರಣರ ಬಳಿವಿಡಿದರೆ. ಎನ್ನ ದಂದುಗ ಹಿಂಗುವುದು.

---

KPWD.-8708-46

## ಭಗವಾನ್

# ಮಹಾವೀರ



ಜಿ. ಪಿ. ರಾಜರತ್ನಂ

"ಜೀವಮುಜೀವಂ ದವ್ವಂ ಜಿಣವರವಸಹೇಣ ಜೇಣ ಣಿದ್ದಿಟ್ಠಂ
ದೇವಿಂದವಿಂದವಂದಂ ವಂದೇ ತಂ ಸವ್ವದಾ ಸಿರಸಾ"

ಯಾವ ಜಿನವರವೃಷಭನಿಂದ
ಜೀವ ಅಜೀವ ದ್ರವ್ಯಗಳು ನಿರ್ದಿಷ್ಟವಾದುವೋ;
ಆ ದೇವೇಂದ್ರವೃಂದವಂದ್ಯನನ್ನು
ಸರ್ವದಾ ಶಿರಸಾ ವಂದಿಸುತ್ತೇನೆ.



ಶಾಕ್ಯ ಸಾಹಿತ್ಯ ಮಂಟಪ,
ಮಲ್ಲೇಶ್ವರ—ಬೆಂಗಳೂರು.

ಏಪ್ರಿಲ್ ೧೯[illegible]] [ನಾಲ್ಕಾಣೆ

## ಜಿ. ಪಿ. ರಾಜರತ್ನಂ
## ಅವರ ಇತರ ಪುಸ್ತಕಗಳು

ತುತ್ತೂರಿ    ಕಡಲೆಪುರಿ    ಚುಟುಕ    ಗುಲಗಂಜಿ

ಕೆನೆಹಾಲು    ಕಲ್ಲುಸಕ್ಕರೆ

---

ಗೌತಮ ಬುದ್ಧ

ಶ್ರೀ ರಾಮಚಂದ್ರ    ಶ್ರೀ ಹರ್ಷ    ಅಶೋಕ [illegible]

---

ರತ್ನನ ಪದಗಳು    ಶಾಂತಿ    ರತ್ನನ ಮೋಸ್ತ್ರಿ ರತ್ನ

ಗಂಡುಗೊಡಲಿ    ಹನಿಗಳು    ಬೆಳುದಿಂಗಳು

---

(ಉಳಿದ ಪುಸ್ತಕಗಳು ಕಡೆಗೆ)

ಧರ್ಮಪ್ರಕಾಶ ಮುದ್ರಾಲಯ, ಮಂಗಳೂರು

# ಪ್ರವೇಶ

ಇಂದು ಚೈತ್ರ ಶುಕ್ಲ ತ್ರಯೋದಶಿ.

ವೈಶಾಖ ಶುಕ್ಲ ಪೂರ್ಣಿಮೆಯು ಬುದ್ಧನ ಜನನ ಬೋಧಿದರ್ಶನ ಪರಿನಿರ್ವಾಣಗಳ ದಿನವೆಂದು ಬೌದ್ಧರಿಗೆ ಮಾನ್ಯವಾದಂತೆ ಚೈತ್ರ ಶುಕ್ಲ ತ್ರಯೋದಶಿಯು ಭಗವಾನ್ ಮಹಾವೀರನ ಜನ್ಮದಿನವೆಂದು ಜೈನರಿಗೆ ಮಾನ್ಯ. ವೈಶಾಖ ಶುದ್ಧ ಪೂರ್ಣಿಮೆಯಂದು ಸರ್ವತ್ರ ಬುದ್ಧಜಯಂತಿಯನ್ನು ಆಚರಿಸುವಂತೆಯೇ ಚೈತ್ರ ಶುಕ್ಲ ತ್ರಯೋದಶಿಯಂದು ಮಹಾವೀರ ಜಯಂತಿಯನ್ನು ಸರ್ವತ್ರ ಆಚರಿಸಬೇಕಾದುದು ಯೋಗ್ಯವಾದರೂ ಏನೋ, ಏಕೋ, ಈ ಜಯಂತಿಯ ಬಗ್ಗೆ ಉತ್ತರ ಹಿಂದೂಸ್ಥಾನದಲ್ಲಿ ಕಾಣಬರುವ ಲವಲವಿಕೆ ಉತ್ಸಾಹಗಳು ದಕ್ಷಿಣದಲ್ಲಿ ಜೈನರಲ್ಲಿಯೂ ಕಂಡುಬರುತ್ತಿಲ್ಲ.

ಜಗತ್ತಿನ ಬಹುಜನರು ಬುದ್ಧನಿಂದ ಕಲಿತ ಅನೇಕ ಮಹಾ ತತ್ವಗಳಲ್ಲಿ

**"ಉಕ್ಕಾಧರೋ ಮನುಸ್ಸಾನಂ ನಿಚ್ಚಂ ಅಪಚಿತೋ ಮಯಾ"**

ಎಂಬುದೂ ಒಂದು. (ಅಜ್ಞಾನದ ಕತ್ತಲೆಯಲ್ಲಿ ಕಣ್ಣುಕಾಣದ) ಮನುಷ್ಯರಿಗೆ (ಕಣ್ಣು ಕಾಣಲೆಂದು ಜ್ಞಾನದ) ಪಂಜು ಹಿಡಿದವರನ್ನು ನಾನು ಸದಾ ಗೌರವಿಸುತ್ತೇನೆ" ಎಂಬುದು ಬುದ್ಧನ ಮಕ್ಕಳಿಗೆ ಒಪ್ಪುವ ಮಾತು.

ನಮ್ಮ ಭರತಖಂಡದಲ್ಲಿ ಆಗಿಹೋದ ಪ್ರಸಿದ್ಧ "**ಉಲ್ಕಾಧರ**"ರಲ್ಲಿ ಬುದ್ಧನ ಹಿರಿಯ ಸಮಕಾಲೀನನಾದ '**ನಿಗಂಠ ನಾಥಪುತ್ತ**'ನೆಂಬವನು, ಜೈನರ ಚರಮ ತೀರ್ಥಂಕರನೆನಿಸಿ "**ಮಹಾವೀರ**"ನೆಂಬ ಹೆಸರಿನಿಂದ ಹೆಚ್ಚು ಬಳಕೆಯಾದವನೂ ಒಬ್ಬನು. ಆ ಮಹಾಪುರುಷನ ವಿಷಯವಾಗಿ ದಿಗಂಬರ, ಶ್ವೇತಾಂಬರ, ಸ್ಥಾನಕವಾಸಿ ಮತ್ತು ಬೌದ್ಧ ಸಂಪ್ರದಾಯಗಳಲ್ಲಿರುವ ವಿವಿಧ ನಿರೂಪಣೆಗಳನ್ನು ಸಮಾಲೋಚಿಸಿ ಆತನ ಜೀವನವನ್ನು ಬರೆಯುವ ಬಯಕೆ ಹಲವು ವರುಷದಿಂದ ಉಂಟು. ಅದಕ್ಕೆ ಇನ್ನೂ ಸಿದ್ಧತೆ ಸಂಪೂರ್ಣವಾಗಿಲ್ಲ.

ಮೇಲೆ ಹೇಳಿದ ಸಂಪ್ರದಾಯಗಳಲ್ಲಿ ಒಂದಾದ ಶ್ವೇತಾಂಬರ ರೀತಿಯನ್ನು ಆಧರಿಸಿ ಕಳೆದ ದೀಪಾವಳಿ ಸಮಯದಲ್ಲಿ ಪ್ರಕಟಸಿದ '**ಮಹಾವೀರನ ಮಾತುಕತೆ**'ಯನ್ನು ಕೆಲವರಾದರೂ ನೋಡಿರಬಹುದು.

ಈ ಪುಸ್ತಕದಲ್ಲಿ ಕೇವಲ ದಿಗಂಬರ ಸಂಪ್ರದಾಯದ ರೀತಿಯಾಗಿ ಬರೆದ ಮಹಾವೀರನ ಜೀವನಚರಿತ್ರನನ್ನು ಕಾಣಬಹುದು. ಇದನ್ನು ಜೈನರಿಗಿಂತ

ಹೆಚ್ಚಾಗಿ ಜೈನರಲ್ಲದವರಿಗಾಗಿ ಬರೆದಿರುವೆನಾದುದರಿಂದ ಜೈನ ಪರಿಭಾಷೆಯನ್ನು
ಬಹಳವಾಗಿ ತುಂಬದೆ ತೀರದ ಕಡೆ ಮಾತ್ರ ತಂದಿದ್ದೇನೆ. ಜೈನ ಬಾಂಧವರು
ಇದನ್ನು ಅಪಚಾರವೆಂದು ಗಣಿಸದಿರುವ ಕೃಪೆ ಮಾಡಬೇಕು. ಈ ಪುಸ್ತಕದಲ್ಲಿ
ಬಳಸಿರುವ ಪರಿಭಾಷೆಗೆ ವಿವರಣೆ ಬೇಕಾದರೆ, ದಯೆಮಾಡಿ ನನ್ನ **'ಮಹಾ
ವೀರನ ಮಾತುಕತೆ'**ಯ ಕಡೆಯ ಪುಟಗಳನ್ನು ನೋಡಬಹುದು.

ಇಲ್ಲಿನ ವಿಷಯಗಳನ್ನು ತಿಳಿಯಲು 'ಉತ್ತರ ಪುರಾಣ'ದ ಕಡೆಯ
ಭಾಗಗಳನ್ನು ಪ್ರೇಮದಿಂದ ಕಳುಹಿಸಿಕೊಟ್ಟ ಜೈನಧರ್ಮಭೂಷಣ ಬ್ರಹ್ಮ
ಚಾರಿ ಶೀತಲಪ್ರಸಾದರಿಗೂ, 'ಚಾವುಂಡರಾಯ ಪುರಾಣ'ವನ್ನು ನೋಡಲು
ಅನುಕೂಲಮಾಡಿಕೊಟ್ಟ ಮೈಸೂರಿನ ಓರಿಯೆಂಟಲ್ ಲೈಬ್ರರಿಯವರಿಗೂ,
ಬಾಬೂ ಕಾಮತಾ ಪ್ರಸಾದಜಿಯವರ ಹಿಂದೀ ಗ್ರಂಥಗಳನ್ನು ಆದರದಿಂದ
ಒದಗಿಸಿದ ಸೂರತ್ತಿನ ಮೂಲಚಂದ್ ಕಿಸನದಾಸ್ ಕಪಾಡಿಯಾ ಅವರಿಗೂ
ನಾನು ಕೃತಜ್ಞನಾಗಿದ್ದೇನೆ. ಅಂತೆಯೇ, ಹೆಜ್ಜೆಹೆಜ್ಜೆಗೂ ಸಹಾಯವಾಗಿರುವ
ಜಗಮಂದರಲಾಲ್ ಜೈನಿಯವರ "ಔಟ್‌ಲೈನ್ಸ್ ಆಫ್ ಜೈನಿಸಂ" ಗ್ರಂಥಕ್ಕೂ
ನಾನು ಋಣಿ.

ಈ ಪುಸ್ತಕದಲ್ಲಿ ಕೊಟ್ಟಿರುವ ಎರಡು ಚಿತ್ರಗಳಲ್ಲಿ ಮೊದಲನೆಯದು
ಮಿತ್ರರೊಬ್ಬರು ಚಿತ್ರಿಸಿದುದು. ಅದರಲ್ಲಿ ನಡುವೆ ಜಿನಮೂರ್ತಿಯನ್ನೂ, ಕೆಳಗೆ
ತೀರ್ಥಂಕರ ಮಾತೆಯ ಮುಖದಲ್ಲಿ ಸಿಂಹ ಪ್ರವೇಶಿಸುವುದನ್ನೂ, ಸುತ್ತ ಆಕೆ
ಕಂಡ ಹದಿನಾರು ಸ್ವಪ್ನಗಳನ್ನೂ ಬಿಡಿಸಿದ್ದಾರೆ. ಎರಡನೆಯದು ಶ್ರವಣ ಬೆಳ
ಗುಳ ಶ್ರೀಮಠದಿಂದ ಶ್ರೀಯುತ ಜಿ. ಪಿ. ಪದ್ಮಯ್ಯನವರು ತೆಗೆದು ಕಳುಹಿಸಿದ
ಮಹಾವೀರಸ್ವಾಮಿಯ ಮೂರ್ತಿ. ಇವರಿಬ್ಬರ ಸಹಾಯಕ್ಕೆ ನಾನು ಕೃತಜ್ಞ.

ಈ ಸಣ್ಣ ಪರಿಚಯವನ್ನು ಈ ಚೈತ್ರ ಶುದ್ಧ ತ್ರಯೋದಶಿಯ ಮಹಾವೀರ
ಜಯಂತಿಯ ಕಾಲದಲ್ಲಿ, ಆ ಉಲ್ಲಾಕಥರನ ಬಗೆಗೆ ನನಗಿರುವ ಗೌರವದ
ಕಾಣಿಕೆಯಾಗಿ ನನ್ನ ಕನ್ನಡ ಬಾಂಧವರಿಗೆ ಸಮರ್ಪಿಸಿದ್ದೇನೆ. ಪ್ರಮಾದ
ಗಳೇನಾದರೂ ಇರುವಲ್ಲಿ ಬಲ್ಲವರು ಪ್ರೇಮದಿಂದ ತಿದ್ದಬೇಕು.

* ಜೈನಂ ಜಯತು ಶಾಸನಂ *

೧೨—೪—'೩೮
ಮಲ್ಲೇಶ್ವರ

ಜಿ. ಪಿ. ರಾಜರತ್ನಂ

# ಭಗವಾನ್ ಮಹಾವೀರ

## ತೀರ್ಥಂಕರರು

"ಅರ್ಜುನ,
ಧರ್ಮ ಕುಂದಿದಾಗಲೆಲ್ಲ,
ಅಧರ್ಮ ಎದ್ದು ನಿಂತಾಗಲೆಲ್ಲ,
ಆಗ ನನ್ನನ್ನು ನಾನು ಸೃಷ್ಟಿಸಿಕೊಳ್ಳುತ್ತೇನೆ.
"ಒಳ್ಳೆಯವರನ್ನು ಕಾಪಾಡುವುದಕ್ಕಾಗಿ
ಕೆಟ್ಟವರನ್ನು ನಾಶಮಾಡುವುದಕ್ಕಾಗಿ
ಧರ್ಮವನ್ನು ಚೆನ್ನಾಗಿ ನಿಲ್ಲಿಸುವುದಕ್ಕಾಗಿ
ಯುಗಯುಗದಲ್ಲೂ ನಾನು ಹುಟ್ಟಿ ಬರುತ್ತೇನೆ"

ಎಂದು ಶ್ರೀಕೃಷ್ಣನು ಗೀತೆಯಲ್ಲಿ ಅರ್ಜುನನಿಗೆ ಉಪದೇಶಮಾಡಿದನು.

ಶುಭ್ರವಾಗಿ ಬೆಳಗುತ್ತಿದ್ದ ಧರ್ಮವು ಒಂದಾನೊಂದು ಸಮಯದಲ್ಲಿ ಕುಂದುತ್ತದೆಂದೂ, ಭಗವಂತನು ಲೋಕದ ಹಿತಕ್ಕಾಗಿ ಮನುಷ್ಯರ ನಡುವೆ ಅವತಾರಮಾಡಿ ಕುಂದಿದ ಧರ್ಮವನ್ನು ಬೆಳಗಿಸಿ ಜನರನ್ನು ಧರ್ಮದ ದಾರಿಯಲ್ಲಿ ತಿದ್ದಿ ತಿರುವುವನೆಂದೂ ಹಿಂದುಗಳು ಹೇಳುತ್ತಾರೆ. ಈ ಕಾರ್ಯಕ್ಕಾಗಿ ಭೂಮಿಗೆ ಇಳಿದುಬಂದ ಭಗವಂತನ ಅವತಾರಗಳಲ್ಲಿ ಮೀನು, ಆಮೆ, ವರಾಹ ಮೊದಲಾದ ದಶಾವತಾರಗಳು ಮುಖ್ಯವಾದವು. ಇವು ಹತ್ತು ಅವತಾರ ಮಾತ್ರವಲ್ಲದೆ ಕಪಿಲ, ಋಷಭ, ನರನಾರಾಯಣ, ದತ್ತಾತ್ರೇಯ ಮುಂತಾದ ಇನ್ನೂ ಹಲವು ಅವತಾರಗಳುಂಟು.

ಈ ರೀತಿಯಲ್ಲಿ ಆಗಾಗ್ಗೆ ಅವತಾರ ಮಾಡುವನೆಂದು ಹಿಂದುಗಳು ಹೇಳುವ ದೇವರನ್ನು ಜೈನರು ಒಪ್ಪುವುದಿಲ್ಲ. ಆದರೆ ಅವರು ದೇವರ ಸಮಾನರೆಂದು ಎಣಿಸಿ ಪೂಜೆಮಾಡುವ **ತೀರ್ಥಂಕರ**ರೆಂಬ ಮಹಾಪುರುಷರು ಹಿಂದುಗಳ ದೇವರಿಗೆ ಬಹುಮಟ್ಟಿಗೆ ಸರಿಹೋಲುವರೆಂದು ಹೇಳಬಹುದು. ಈ ತೀರ್ಥಂಕರರೆಂಬವರು ನಮ್ಮೆಲ್ಲರಂತೆಯೇ ಮನುಷ್ಯರಾಗಿದ್ದವರು. ಮನುಷ್ಯ

ಜನ್ಮದಲ್ಲಿ ತಾವು ಮಾಡಿದ ಕೆಲಸಗಳ ಫಲವಾಗಿ ಒಮ್ಮೆ ನರಕದಲ್ಲಿ, ಒಮ್ಮೆ ಮೃಗವಾಗಿ, ಒಮ್ಮೆ ಮನುಷ್ಯನಾಗಿ, ಒಮ್ಮೆ ದೇವತೆಯಾಗಿ ಹುಟ್ಟಿ ಅನೇಕ ಜನ್ಮಗಳನ್ನು ಎತ್ತಿ ಅಲೆದಾಡುವರು. ಬರುಬರುತ್ತ ತಮ್ಮಲ್ಲಿನ ಕೆಟ್ಟ ಗುಣಗಳನ್ನೆಲ್ಲ ಕಳೆದುಕೊಂಡು ಕೇವಲ ಸದ್ಗುಣಗಳನ್ನೇ ಬೆಳೆಸುವರು. ಹೀಗೆ ಎಲ್ಲ ಸದ್ಗುಣಗಳನ್ನೂ ಬೆಳೆಸಿ, ಮನುಷ್ಯನಾಗಿ ಜನ್ಮತಾಳಿ, ತೀರ್ಥಂಕರನಾಗುವ ಫಲ ಕೊಡುವಂತಹ ಒಂದು ವಿಶೇಷ ಕರ್ಮವನ್ನು ಆ ಜನ್ಮದಲ್ಲಿ ನಡೆಸಿ, ಸತ್ತ ಮೇಲೆ ಸ್ವರ್ಗದಲ್ಲಿ ದೇವತೆಯಾಗಿ ಹುಟ್ಟುವರು. ಸ್ವರ್ಗದಲ್ಲಿ ಬಾಳಬೇಕಾದ ಕಾಲ ಮುಗಿದು ಅಲ್ಲಿಯ ಆಯುಷ್ಯ ಕೊನೆಯಾದ ಮೇಲೆ ಭೂಮಿಯಲ್ಲಿ ಮನುಷ್ಯರಾಗಿ ಅವತರಿಸಿ, ತಪಸ್ಸಿನಿಂದ ನಾಲ್ಕು ಘಾತಿಕರ್ಮಗಳನ್ನು ಕ್ಷಯಗೊಳಿಸಿ ಕೇವಲಜ್ಞಾನವನ್ನು ಪಡೆದು, ತೀರ್ಥಂಕರರೆನಿಸಿ ಜಗತ್ತಿಗೆ ಧರ್ಮವನ್ನು ಬೋಧಿಸುವರು.

## ಪಂಚ ಕಲ್ಯಾಣಗಳು

ಈ ತೀರ್ಥಂಕರರಲ್ಲಿ ಪ್ರತಿಯೊಬ್ಬನೂ ಸ್ವರ್ಗದಿಂದ ಭೂಮಿಗೆ ಅವತರಿಸುವಾಗಲೆಲ್ಲ ಕ್ಷತ್ರಿಯ ವಂಶದಲ್ಲಿಯೆ ಹುಟ್ಟಬರುವನು. ಆತನ ಅವತಾರಕ್ಕೆ ಆರು ತಿಂಗಳು ಮುಂಚಿತವಾಗಿ ಸೌಧರ್ಮ ಸ್ವರ್ಗದ ಇಂದ್ರನೇ ಮೊದಲಾದ ದೇವತೆಗಳು ಬಂದು, ತೀರ್ಥಂಕರನ ತಾಯಿಯಾಗುವಾಕೆಯ ಗರ್ಭವನ್ನು ಶುದ್ಧಿಮಾಡುವರು. ಆಗ **ಪಂಚಾಶ್ಚರ್ಯ**ವಾಗುವುದು; ಎಂದರೆ— ಚಿನ್ನದ ಮಳೆ ಸುರಿಯುವುದು, ದೇವತೆಗಳು ಹೊಗಳುವರು, ಸುರದುಂದುಭಿ ಮೊಳಗುವುದು, ತಂಗಾಳಿ ಬೀಸುವುದು ಮತ್ತು ಹೂಮಳೆಗರೆಯುವುದು.

ತೀರ್ಥಂಕರನು ಅವತರಿಸುವುದಕ್ಕೆ ಮೊದಲು ಆತನ ತಾಯಿಗೆ ಹದಿನಾರು ಶುಭಸ್ವಪ್ನಗಳಾಗುವುವು. ಆಕೆಯು ಆನೆ, ಎತ್ತು, ಸಿಂಹ, ಲಕ್ಷ್ಮಿ, ಎರಡು ಹೂಮಾಲೆ, ಚಂದ್ರ, ಸೂರ್ಯ, ಎರಡು ಮೀನು, ಎರಡು ತುಂಬಿದ ಕೊಡ, ಪದ್ಮಸರಸ್ಸು, ಸಮುದ್ರ, ಸಿಂಹಾಸನ, ದೇವವಿಮಾನ, ನಾಗಭವನ, ರತ್ನದ ರಾಶಿ, ಪ್ರಜ್ವಲಿಸುವ ಬೆಂಕಿ— ಇವುಗಳನ್ನು ಕಾಣುವಳು. ಅಲ್ಲದೆ ಆ ತೀರ್ಥಂಕರನ ಲಾಂಛನವು ತನ್ನಲ್ಲಿ ಬಂದು ಸೇರಿದಂತೆಯೂ ಸ್ವಪ್ನ ಕಾಣುವಳು. ಈ ಅವತಾರವಾದಾಗ ಸೌಧರ್ಮೇಂದ್ರನೇ ಮೊದಲಾದ ದೇವತೆಗಳು ಬಂದು ತೀರ್ಥಂಕರನ ತಾಯಿತಂದೆಗೆ ಮಂಗಲಾಭಿಷೇಕ ಮಾಡಿ ಆನಂದದಿಂದ

ಕುಣಿದು ಹೋಗುವರು. ದೇವಸ್ತ್ರೀಯರು ತೀರ್ಥಂಕರನ ತಾಯಿಯ ಶುಶ್ರೂಷೆಗಾಗಿ ಅಲ್ಲಿಯೆ ನಿಲ್ಲುವರು. ಈ ಉತ್ಸವವನ್ನು **'ಸುರಲೋಕಾವತರೋತ್ಸವ'** ಅಥವಾ **'ಗರ್ಭಕಲ್ಯಾಣ'** ಎಂದು ಕರೆಯುವರು.

ಒಂಬತ್ತು ತಿಂಗಳನಂತರ ತೀರ್ಥಂಕರನ ಜನನವಾಗುವುದು. ಆಗ ಮೂರು ಲೋಕವೂ ಸಂತೋಷಪಡುವುದು. ಸೌಧರ್ಮೇಂದ್ರನೇ ಮೊದಲಾದವರು ಭೂಮಿಗೆ ಬರುವರು. ಇಂದ್ರನ ಅಪ್ಪಣೆಯ ಮೇರೆ ಇಂದ್ರಾಣಿಯು ತೀರ್ಥಂಕರನ ತಾಯಿಗೆ ಮಾಯಾನಿದ್ರೆ ಬರಿಸಿ, ಆಕೆಯ ಪಕ್ಕದಲ್ಲಿ ಮಾಯಾ ಶಿಶುವನ್ನು ಇರಿಸಿ, ತೀರ್ಥಂಕರನಾಗಲು ಹುಟ್ಟಿದ ಮಗುವನ್ನು ಇಂದ್ರನಿಗೆ ಕೊಡುವಳು. ಇಂದ್ರನು ಆ ಮಗುವನ್ನು ಎತ್ತಿಕೊಂಡು ಐರಾವತವೆಂಬ ತನ್ನ ಆನೆಯನ್ನು ಏರಿ ಮೇರುಪರ್ವತದ ತುದಿಯ ಪಾಂಡುಕ ಶಿಲೆಯ ಬಳಿಗೆ ಪರಿವಾರದೊಡನೆ ಹೋಗುವನು. ಅಲ್ಲಿ ಮಗುವನ್ನು ಪೂರ್ವಕ್ಕೆ ಮುಖ ಮಾಡಿ ಕುಳ್ಳಿರಿಸಿ, ಕ್ಷೀರಸಾಗರದಿಂದ ಹಾಲನ್ನು ಚಿನ್ನದ ಕೊಡಗಳಲ್ಲಿ ತರಿಸಿ ಮಗುವಿಗೆ ಅಭಿಷೇಕ ಮಾಡಿಸುವನು. ಮಗುವಿಗೆ ಕಿವಿ ಚುಚ್ಚುವರು, ನಾಮಕರಣ ಮಾಡುವರು. ಅನಂತರ ಮಗುವನ್ನು ತಂದು ತಾಯಿತಂದೆಗೆ ಒಪ್ಪಿಸಿ ಮರಳಿ ಹೋಗುವರು. ಈ ಉತ್ಸವವನ್ನು **'ಜನ್ಮಾಭಿಷೇಕೋತ್ಸವ'** ಅಥವಾ **'ಜನ್ಮಾಭಿಷೇಕ ಕಲ್ಯಾಣ'** ಎಂದು ಕರೆಯುವರು.

ತೀರ್ಥಂಕರನು ಕ್ರಮವಾಗಿ ಬೆಳೆದು ವೃದ್ಧಿ ಹೊಂದುತ್ತಿರುವನು. ಸಕಾಲದಲ್ಲಿ ಆತನಿಗೆ ಸಂಸಾರದಲ್ಲಿ ಬೇಸರ ಹುಟ್ಟುವುದು. ತಾನು ಮನೆ ಬಿಟ್ಟು ಹೋಗಿ ಸಂನ್ಯಾಸಿಯಾಗಿ ತಪಸ್ಸು ಮಾಡಬೇಕೆಂದು ಅವನಿಗೆ ಮನಸ್ಸಾಗುವುದು. ಅದನ್ನು ತಿಳಿದು ಲೋಕಾಂತಿಕರೆಂಬ ದೇವತೆಗಳು ಬಂದು ಆತನು ವೈರಾಗ್ಯ ಹೊಂದಿ ತಪಸ್ಸನ್ನು ನಡೆಸಬೇಕೆಂದು ಬೋಧಿಸಿ ಆತನ ನಿಶ್ಚಯವನ್ನು ದೃಢಪಡಿಸುವರು. ಇಂದ್ರಾದಿಗಳು ಸ್ವಾಮಿಗೆ ಮಂಗಲಸ್ನಾನ ಮಾಡಿಸುವರು. ತೀರ್ಥಂಕರನು ತಾಯಿತಂದೆಯನ್ನೂ ಪರಿವಾರವನ್ನೂ ಬೀಳ್ಕೊಂಡು ದೇವತೆಗಳು ತನಗಾಗಿ ತಂದ ಪಲ್ಲಕ್ಕಿಯನ್ನು ಹತ್ತುವನು. ದೇವತೆಗಳು ಅದನ್ನು ಬಹು ವೈಭವದಿಂದ ಹೊತ್ತುಕೊಂಡು ಹೋಗುವರು. ಊರಾಚೆಯ ವನದಲ್ಲಿ ಪಲ್ಲಕ್ಕಿಯನ್ನು ನಿಲ್ಲಿಸಿ, ತೀರ್ಥಂಕರನು ಪರ್ಯಂಕಾಸನದಲ್ಲಿ ಕುಳಿತು, ಉಪವಾಸವನ್ನು ಆಚರಿಸಿ, ತನ್ನ ವಸ್ತ್ರ ಆಭರಣಗಳನ್ನೆಲ್ಲ ಬಂದವರಿಗೆ ಹಂಚಿಕೊಟ್ಟು, 'ಓಂ ನಮಸ್ಸಿದ್ಧೇಭ್ಯಃ' ಎಂದು ಐದು ಮುಷ್ಟಿಗಳಲ್ಲಿ ತನ್ನ ತಲೆಗೂದಲುಗಳನ್ನು

ಕತ್ತು ಹಾಕುವನು. ಇಂದ್ರನು ಅದನ್ನು ಭಕ್ತಿಯಿಂದ ಆತುಕೊಂಡು ಪೂಜಿ ಕ್ಷೀರ ಸಮುದ್ರದಲ್ಲಿ ಹಾಕುವನು. ಈ ಉತ್ಸವವನ್ನು **'ಪರಿನಿಷ್ಕ್ರಮ ಮಹೋತ್ಸವ'** ಅಥವಾ **'ಪರಿನಿಷ್ಕ್ರಮಣ ಕಲ್ಯಾಣ'** ಎಂದು ಕರೆಯುವರು.

ಮುಂದೆ, ತೀರ್ಥಂಕರನು ತಪಸ್ಸು ಮಾಡಿ, ಇತರರ ಮನಸ್ಸನ್ನು ತಿಳಿಯ ಬಲ್ಲ **'ಮನಃಪರ್ಯಯ'**ವೆಂಬ ಜ್ಞಾನವನ್ನು ಪಡೆಯುವನು. ಆಹಾರಕ್ಕಾಗಿ ಸಂಚಾರಮಾಡಿ ಶುದ್ಧವಾದ ಆಹಾರವನ್ನು ಸ್ವೀಕರಿಸುವನು. ಆಗಲೂ ಪಂಚಾಶ್ಚರ್ಯಗಳು ಆಗುವುವು. ಅನಂತರ ತೀರ್ಥಂಕರನು ತನಗೆ ಬಂದೊದಗಿದ ತೊಂದರೆಗಳನ್ನೆಲ್ಲ ಸಹಿಸಿಕೊಂಡು **'ಕೇವಲ ಜ್ಞಾನ'**ವೆಂಬ ಸಂಪೂರ್ಣ ಜ್ಞಾನವನ್ನು ಪಡೆದು ಸರ್ವಜ್ಞನಾಗುವನು. ಅಂದಿನಿಂದ ಆತನನ್ನು **ಜಿನ, ಅರ್ಹತ, ತೀರ್ಥಂಕರ** ಎಂದು ಅನೇಕ ಹೆಸರುಗಳಿಂದ ಕರೆಯುವರು. ಈ ಕೇವಲಜ್ಞಾನ ಹುಟ್ಟಿದಾಗ ಕೂಡ ಇಂದ್ರಾದಿ ದೇವತೆಗಳು ಬಂದು ಆನಂದದಿಂದ ಕುಣಿದು ಹೋಗುವರು. ಈ ಉತ್ಸವಕ್ಕೆ **'ಕೈವಲ್ಯ ಬೋಧೋತ್ಸವ'** ಅಥವಾ **'ಕೇವಲ ಜ್ಞಾನ ಕಲ್ಯಾಣ'** ಎಂದು ಹೆಸರು.

ಇಲ್ಲಿಂದ ಮುಂದೆ ತೀರ್ಥಂಕರನು ಲೋಕಕ್ಕೆ ಧರ್ಮವನ್ನು ಬೋಧಿಸುತ್ತ ಸಂಚರಿಸುವನು. ಸ್ವಾಮಿಯ ಅನುಕೂಲಕ್ಕಾಗಿ ಕುಬೇರನು ಇಂದ್ರನ ಅಪ್ಪಣೆಯ ಪ್ರಕಾರ **'ಸಮವಸರಣ'**ವೆಂಬ ದೊಡ್ಡ ಚಲಿಸುವ ಮಂಟಪವನ್ನು ನಿರ್ಮಿಸುವನು. ಚಿನ್ನ ರತ್ನಗಳಿಂದ ಮಾಡಿದ ಆ ವಿಶಾಲವಾದ ಮಂಟಪದ ನಡುವೆ ಒಂದು ಗಂಧಕುಟಿ; ಅದರಲ್ಲಿ ಲಕ್ಷ್ಮೀಮಂಟಪ; ಅದರ ಮೇಲೆ ಮೂರು ಮೇಖಲೆಯ ಪೀಠ; ಅದರ ಮೇಲೆ ಸಾವಿರದೆಂಟು ಎಸಳುಗಳ ತಾವರೆ; ಅದರ ಮೇಲೆ ನಾಲ್ಕು ಬೆರಳು ಬಿಟ್ಟು ತೀರ್ಥಂಕರ ಸ್ವಾಮಿ. ಈ ಸಮವಸರಣದಲ್ಲಿ ತೀರ್ಥಂಕರನ ಮುಖ್ಯ ಶಿಷ್ಯರು ಮಾತ್ರವಲ್ಲದೆ, ಭಕ್ತರಾದ ಸಂನ್ಯಾಸಿಗಳೂ ಗೃಹಸ್ಥರೂ ಬಂದು ನೆರೆಯುವರು. ಮನುಷ್ಯರು ಮಾತ್ರವಲ್ಲದೆ ದೇವತೆಗಳೂ ಕೂಡುವರು. ಕೇಳಿದವರೆಲ್ಲರಿಗೂ ಅರ್ಥವಾಗುವ ದಿವ್ಯವಾಣಿಯಲ್ಲಿ ತೀರ್ಥಂಕರನು ಧರ್ಮವನ್ನು ವಿಸ್ತರಿಸುವನು. ಆತನ ಸಮವಸರಣ ಮಂಡಲವು ಸಂಚಾರಮಾಡಿದ ಕಡೆಯಲ್ಲೆಲ್ಲ ಪ್ರಾಣಿಗಳು ತಮ್ಮ ತಮ್ಮ ಸಹಜ ವೈರವನ್ನು ಬಿಟ್ಟು ಪರಸ್ಪರ ಪ್ರೇಮದಿಂದ ವರ್ತಿಸುವುವು. ಇದು ಸ್ವಾಮಿಯ ಸನ್ನಿಧಿಯ ಮಹಿಮೆ.

ಈ ರೀತಿಯಾಗಿ ಎಲ್ಲೆಲ್ಲಿಯೂ ಪ್ರೇಮವನ್ನು ಬಿತ್ತಿ ಬೆಳೆಸುತ್ತ, ಜನರನ್ನು ತಿದ್ದುತ್ತ, ತೀರ್ಥಂಕರನು ತನ್ನ ಆಯುಸ್ಸು ಇರುವಷ್ಟು ಕಾಲವೂ ವಿಹರಿಸುವನು. ವಿಹರಿಸಿ, ಶುಕ್ಲಧ್ಯಾನವೆಂಬ ಒಂದು ವಿಶೇಷ ರೀತಿಯ ಧ್ಯಾನದಿಂದ ಮುಕ್ತಿ ಪಡೆಯುವನು. ಆಗ ಇಂದ್ರಾದಿ ದೇವತೆಗಳು ಬಂದು ಸ್ವಾಮಿಯ ಶರೀರವನ್ನು ದಹನ ಮಾಡಿ, ಆ ಪವಿತ್ರ ಭಸ್ಮವನ್ನು ಹಣೆಯಲ್ಲಿ ತಾಳಿ, ಆನಂದದಿಂದ ಕುಣಿದು ಹೋಗುವರು. ಈ ಮಹೋತ್ಸವವನ್ನು **'ಪರಿನಿರ್ವಾಣ ಮಹೋತ್ಸವ'** ಅಥವಾ **'ಪರಿನಿರ್ವಾಣ ಕಲ್ಯಾಣ'** ಎಂದು ಕರೆಯುವರು.

## ಇಪ್ಪತ್ತನಾಲ್ಕು ತೀರ್ಥಂಕರರು

ಈ ತೀರ್ಥಂಕರರು ಹಿಂದುಗಳ ಅವತಾರಗಳಂತೆಯೇ ಕುಂದಿದ ಧರ್ಮವನ್ನು ಬೆಳಗುವುದಕ್ಕಾಗಿ ಜನ್ಮತಾಳಿದವರೆಂದು ಮೇಲೆ ಹೇಳಿತು. ಒಂದು ಕಾಲದಲ್ಲಿ ಜಾಜ್ವಲ್ಯಮಾನವಾಗಿದ್ದ ಧರ್ಮವು ಕುಂದಿ ಕುಂದಿ ಹೀನವಾಗುವುದಕ್ಕೆ ಹಿಡಿಯುವ ಸಮಯವನ್ನು ಜೈನರು **ಅವಸರ್ಪಿಣಿ** ಸಮಯವೆಂದು ಕರೆಯುವರು; ಹೀನವಾದ ಧರ್ಮವು ಬೆಳೆಬೆಳೆದು ತನ್ನ ಮುಂಚಿನ ಸ್ಥಿತಿಗೆ ಬರಲು ಬೇಕಾಗುವ ಸಮಯವನ್ನು **ಉತ್ಸರ್ಪಿಣಿ** ಸಮಯವೆಂದು ಹೇಳುವರು. ಈ ಉತ್ಸರ್ಪಿಣಿ ಅವಸರ್ಪಿಣಿ ಎಂಬವು ಯುಗಗಳಂತೆಯೇ ಕಾಲವನ್ನು ಅಳೆಯುವ ದೊಡ್ಡ ಅಳತೆಗಳು. ಯುಗಯುಗದಲ್ಲೂ ಭಗವಂತನು ಅವತಾರ ಮಾಡುವನೆಂದು ಹಿಂದುಗಳು ಹೇಳುವಂತೆ, ಪ್ರತಿ ಉತ್ಸರ್ಪಿಣಿಯಲ್ಲಿ ಇಪ್ಪತ್ತನಾಲ್ಕು ತೀರ್ಥಂಕರರೂ ಪ್ರತಿ ಅವಸರ್ಪಿಣಿಯಲ್ಲಿ ಇಪ್ಪತ್ತನಾಲ್ಕು ತೀರ್ಥಂಕರರೂ ಅವತರಿಸುವರೆಂದು ಜೈನರು ಹೇಳುವರು.

ಈಗ ನಾವು ಬದುಕಿರುವುದು ಅವಸರ್ಪಿಣಿ ಸಮಯದಲ್ಲಿ. ಈ ಅವಸರ್ಪಿಣಿಯಲ್ಲಿ ಋಷಭ, ಅಜಿತ, ಸಂಭವ, ಅಭಿನಂದನ, ಸುಮತಿ, ಪದ್ಮಪ್ರಭ, ಸುಪಾರ್ಶ್ವ, ಚಂದ್ರಪ್ರಭ, ಪುಷ್ಪದಂತ, ಶೀತಲ, ಶ್ರೇಯಾಂಸ, ವಾಸುಪೂಜ್ಯ, ವಿಮಲ, ಅನಂತ, ಧರ್ಮ, ಶಾಂತಿ, ಕುಂಥು, ಅರ, ಮಲ್ಲಿ, ಮುನಿಸುವ್ರತ, ನಮಿ, ನೇಮಿ, ಪಾರ್ಶ್ವ, ಮಹಾವೀರ ಎಂಬ ಇಪ್ಪತ್ತನಾಲ್ವರು ತೀರ್ಥಂಕರರು ಆಗಿ ಹೋದರು.

ಇವರಲ್ಲಿ ಮೊದಲನೆಯ ತೀರ್ಥಂಕರನಾದ **ಋಷಭನಾಥನು** ಕೃತಯುಗಕ್ಕಿಂತ ಮೊದಲು ಹುಟ್ಟಿದವನು. ಅವನಿಂದಲೇ ಕೃತಯುಗ ಪ್ರಾರಂಭ

ವಾಯಿತು. ಇವರಲ್ಲಿ ಕಡೆಯವನಾದ ಮಹಾವೀರ ಸ್ವಾಮಿಯು ಜನ್ಮತಾ
ಇಂದಿಗೆ ೨೫೩೭ ವರ್ಷ ಸಂದುವು.

## ಪಶ್ಚಿಮ ತೀರ್ಥಂಕರ ಮಹಾವೀರ ಸ್ವಾಮಿ

ಪ್ರತಿ ತೀರ್ಥಂಕರನೂ ಸಾಮಾನ್ಯ ಮನುಷ್ಯನಂತೆಯೇ ಇದ್ದು ಸಂಸಾ
ದಲ್ಲಿ ಜನ್ಮದಿಂದ ಜನ್ಮಕ್ಕೆ ಓಡಿಯಾಡಿ, ಕ್ರಮಕ್ರಮವಾಗಿ ತನ್ನ ಆತ್ಮವನ
ಬೆಳೆಸಿಕೊಂಡು, ಕಡೆಯಲ್ಲಿ ಪರಿಪೂರ್ಣತೆಯನ್ನು ಸಾಧಿಸಿ ತೀರ್ಥಂಕ
ನಾಗುವನೆಂದು ಮೇಲೆ ಹೇಳಿತು. ಮಹಾವೀರನೆಂದು ಪ್ರಸಿದ್ಧನಾದ ಸದ್ಯ
ಕಾಲದ ಕಡೆಯ ತೀರ್ಥಂಕರನ ಜೀವನವನ್ನು ತಿಳಿಯುವಾಗ ಆತನು ಹಿಂದಿ
ಜನ್ಮಗಳಿಂದ ಹೇಗೆ ತನ್ನ ಆತ್ಮವನ್ನು ಬೆಳೆಸುತ್ತ ಬಂದನೆಂಬುದನ್ನು ತಿಳಿಯು
ವುದು ಅಗತ್ಯ. ಮಹಾವೀರನ ಜೀವವು ಎಲ್ಲ ಜೀವಗಳಂತೆಯೇ ಅನಾ
ಯಾದುದು, ಎಂದರೆ ಗಣನೆಗೆ ಸಿಲುಕದಷ್ಟು ಪೂರ್ವಕಾಲದಿಂದ ಸಂಸಾರದಲ್ಲಿ
ಭ್ರಮಿಸುತ್ತಿದ್ದಂತಹದು. ಆ ಎಲ್ಲ ಭವಗಳನ್ನೂ ಹೆಸರಿಸುವುದು ಕೊನೆಮೊದ
ಲಿಲ್ಲದ ಕೆಲಸವಾಗುವುದರಿಂದ, ಯಾವ ಭವದಿಂದ ಆ ಜೀವಕ್ಕೆ ಒಂದು
ನಿರ್ದಿಷ್ಟವಾದ ಬೆಳವಣಿಗೆ ಪ್ರಾಪ್ತವಾಯಿತೋ ಆ ಭವದಿಂದ ಮುಂದೆ ನೋಡು
ವುದು ಸಂಪ್ರದಾಯವಾಗಿದೆ. ಅಂತೆಯೇ ಮಹಾವೀರನ ಜೀವದ ಬೆಳವಣಿಗೆ
ಯನ್ನು ನೋಡೋಣ.

ಮಹಾವೀರನು ಕೃತಯುಗಕ್ಕಿಂತ ಮೊದಲಿನ ಕಾಲದಲ್ಲಿ ಪುರೂರವ
ನೆಂಬ ಬೇಡನಾಗಿ ಜಂಬೂದ್ವೀಪದಲ್ಲಿ ಜನಿಸಿದ್ದನು. ಹಿಂಸಾಕೃತ್ಯಗಳಲ್ಲಿ
ತೊಡಗಿದ್ದ ಆತನು ಸಾಗರಸೇನನೆಂಬ ಮುನಿಯಿಂದ ಧರ್ಮದ ಸ್ವರೂಪವನ್ನು
ಕೇಳಿ ತಿಳಿದು ಅಹಿಂಸಾದಿ ವ್ರತಗಳನ್ನು ಬಹುದಿನಗಳ ವರೆಗೆ ಪಾಲಿಸುತ್ತಿದ್ದು,
ಸತ್ತನಂತರ ಆ ವ್ರತಪಾಲನೆಯ ಪ್ರಭಾವದಿಂದ ಸೌಧರ್ಮಸ್ವರ್ಗದಲ್ಲಿ ದೇವ
ನಾದನು.

ಅಲ್ಲಿಯ ಭೋಗಗಳನ್ನು ಸವಿದು ಆ ದೇವನು ಆದಿ ತೀರ್ಥಂಕರನಾದ
ಋಷಭಸ್ವಾಮಿಯ ಮಗನೂ ಪ್ರಥಮ ಚಕ್ರೇಶನೂ ಆದ ಭರತ ಚಕ್ರವರ್ತಿಗೆ
ಮರೀಚಿಯೆಂಬ ಮಗನಾಗಿ ಹುಟ್ಟಿ, ಋಷಭನಾಥನ ಸಂಗಡವೇ ದಿಗಂಬರೀಯ
ದೀಕ್ಷೆಯನ್ನು ಕೈಕೊಂಡು, ಆ ಕಠಿಣವಾದ ಪರೀಷಹಗಳನ್ನು ಸಹಿಸಲಾರದೆ
ಅದರಿಂದ ವಿಮುಖನಾಗಿ ತನಗೆ ಅನುಕೂಲವೆನಿಸಿದ ಆಚರಣೆಗಳನ್ನು ಆವ

ಲಂಬಿಸಿ, ಆ ಕಾಯಕ್ಲೇಶದ ಬಲದಿಂದ ಐದನೆಯ ಸ್ವರ್ಗದಲ್ಲಿ ದೇವನಾಗಿ ಜನಿಸಿದನು.

ಅಲ್ಲಿಯ ಆಯುಸ್ಸು ಮುಗಿಯಲು, ಕೌಲೀಯಕ ನಗರದ ಕೌಶಿಕನೆಂಬ ಬ್ರಾಹ್ಮಣನಿಗೆ ಮಗನಾಗಿ, ಅಲ್ಲಿಯೂ ಮಿಥ್ಯಾತತ್ವವನ್ನು ಉಪದೇಶಿಸಿ, ತಾನು ಆಚರಿಸಿದ ಕಾಯಕ್ಲೇಶದ ಫಲವಾಗಿ ಸತ್ತನಂತರ ಮೊದಲನೆಯ ಸ್ವರ್ಗದಲ್ಲಿ ದೇವನಾದನು.

ಆ ಸ್ವರ್ಗದ ವಿಷಯಭೋಗಗಳಲ್ಲಿ ಆಸಕ್ತನಾಗಿದ್ದು, ಆಯುಸ್ಸು ಮುಗಿಯುವಾಗ ಶೋಕಪಡುತ್ತ ಸತ್ತು, ಸ್ಥೂಣಾಗಾರವೆಂಬ ನಗರದಲ್ಲಿನ ಭಾರದ್ವಾಜನೆಂಬ ಬ್ರಾಹ್ಮಣನಿಗೆ ಪುಷ್ಪಮಿತ್ರನೆಂಬ ಮಗನಾದನು. ಆ ಜನ್ಮ ದಲ್ಲಿ ಬಾಲ್ಯದಿಂದಲೂ ಹಠಯೋಗವನ್ನು ಅಭ್ಯಾಸಮಾಡಿ, ಸತ್ತನಂತರ ಪುನಃ ಸ್ವರ್ಗದಲ್ಲಿ ದೇವತೆಯಾದನು.

ಸ್ವರ್ಗದಲ್ಲಿರಬೇಕಾದ ಕಾಲ ಮುಗಿಯಲು ಅಲ್ಲಿ ಚ್ಯುತಿಹೊಂದಿ ಶ್ವೇತಿವಿಕಾನಗರಿಯ ಅಗ್ನಿಭೂತಿಯೆಂಬ ಬ್ರಾಹ್ಮಣನಿಗೆ ಅಗ್ನಿಸಹನೆಂಬ ಮಗ ನಾಗಿ ಹುಟ್ಟಿ, ಸಂನ್ಯಾಸಿಗಳ ಧರ್ಮವನ್ನು ಆಚರಿಸಿ, ಅಲ್ಲಿ ಸತ್ತು ಸನತ್ಕುಮಾರ ಸ್ವರ್ಗದಲ್ಲಿ ಬಹು ವಿಭೂತಿಯುಳ್ಳ ದೇವನಾಗಿ ಜನ್ಮತಾಳಿದನು.

ಅಲ್ಲಿಯ ಆಯುಸ್ಸು ಮುಗಿಯಲು ಭೂಮಿಗಿಳಿದು ಮಂದಿರವೆಂಬ ಪುರದಲ್ಲಿ ಗೌತಮನೆಂಬ ಬ್ರಾಹ್ಮಣನಿಗೆ ಅಗ್ನಿಮಿತ್ರನೆಂಬ ಮಗ ನಾದನು.

ಅಲ್ಲಿ ಸತ್ತನಂತರ ಪುನಃ ದೇವನಾಗಿ, ಅಲ್ಲಿ ಸತ್ತ ಬಳಿಕ ಸ್ವಸ್ತಿಮತೀ ನಗರಿಯಲ್ಲಿ ಸಂತಶಯನನೆಂಬ ಬ್ರಾಹ್ಮಣನಿಗೆ ಭಾರದ್ವಾಜನೆಂಬ ಮಗನಾಗಿ ಹುಟ್ಟಿ, ಸಂನ್ಯಾಸಿಗಳ ತಪಸ್ಸನ್ನು ಆಚರಿಸಿ, ಅಲ್ಲಿಯ ಜೀವನ ಮುಗಿಯಲು ಸತ್ತು ಸ್ವರ್ಗಕ್ಕೆ ಹೋದನು.

ಅಲ್ಲಿ ದೇವಾಂಗನೆಯರ ಸಹವಾಸದಲ್ಲಿ ಲೀನನಾಗಿದ್ದು ಅವರ ವಿಯೋ ಗದ ಭಯದಿಂದ ಬಹುವಾಗಿ ಸಂತಾಪಪಡುತ್ತ, ಅಳುಅಳುತ್ತ ಸತ್ತು, ಬಹು ಕಾಲದ ತನಕ ನರಕದಲ್ಲಿಯೂ ಏಕೇಂದ್ರಿಯ ದ್ವೀಂದ್ರಿಯ ಗತಿಗಳಲ್ಲಿಯೂ ಸುತ್ತುತ್ತ ತಿರುಗಿದನು. ಕಡೆಗೆ ಸ್ವಪ್ರಯತ್ನದಿಂದ ಪಾಪದ ಹೊರೆಯನ್ನು ಕತ್ತರಿಸಿದನು. ತನ್ನ ಶುಭಕಾರ್ಯಗಳ ಪರಿಪಾಕದಿಂದ ರಾಜಗೃಹ ನಗರದಲ್ಲಿ ಶಾಂಡಿಲ್ಯನೆಂಬ ಬ್ರಾಹ್ಮಣನಿಗೆ ಸ್ಥಾವರನೆಂಬ ಮಗನಾಗಿ ಹುಟ್ಟಿ ಮಸ್ಕರೀ

ಸಂನ್ಯಾಸಿಗಳಂತೆ ತಪಸ್ಸುಮಾಡಿ, ಜೀವನದ ಕಡೆಗೆ ಬ್ರಹ್ಮಸ್ವರ್ಗದಲ್ಲಿ ಜನಿಸಿದನು.

ಬ್ರಹ್ಮಸ್ವರ್ಗದಿಂದ ಚ್ಯುತಿಹೊಂದಿ ಪುನಃ ರಾಜಗೃಹ ನಗರದ ರಾಜನಾದ ವಿಶ್ವಭೂತಿಗೆ ವಿಶ್ವನಂದಿಯೆಂಬ ಮಗನಾದನು. ಕಾಲಕ್ರಮದಲ್ಲಿ ವಿಶ್ವಭೂತಿಯು ತನ್ನ ಸೋದರನಾದ ವಿಶಾಖಭೂತಿಗೆ ರಾಜ್ಯಭಾರವನ್ನು ವಹಿಸಿ ತಾನು ಸಾಧುವಾದನು. ಆಗ ವಿಶ್ವನಂದಿಗೆ ಯುವರಾಜ ಪದವಿ ಬಂತು. ಅದರಿಂದ ವಿಶಾಖಭೂತಿಯ ಮಗನಾದ ವಿಶಾಖನಂದಿಗೆ ವಿಶ್ವನಂದಿಯಲ್ಲಿ ಈರ್ಷ್ಯೆಯಾಯಿತು. ವಿಶಾಖನಂದಿಗೂ ವಿಶ್ವನಂದಿಗೂ ಯುದ್ಧವಾಯಿತು. ವಿಶ್ವನಂದಿಯು ತಾನು ವಿಜಯಿಯಾದರು ಕೂಡ, ವೈರಾಗ್ಯ ತಾಳಿ ಸಾಧುವಾದನು. ಅದೇ ಸಮಯದಲ್ಲಿ ವಿಶಾಖಭೂತಿ ಕೂಡ ಮುನಿಯಾದನು. ವಿಶಾಖನಂದಿಯು ರಾಜ್ಯಭ್ರಷ್ಟನಾದನು. ಒಮ್ಮೆ, ಮುನಿಯಾದ ವಿಶ್ವನಂದಿಯು ಮಥುರೆಯಲ್ಲಿ ಹೋಗುತ್ತಿರುವಾಗ ಹಸು ತಿವಿದು ಕೆಳಗೆ ಬಿದ್ದನು. ಅಲ್ಲಿಯೇ ಬಳಿಯಿದ್ದ ವಿಶಾಖನಂದಿಯು ಆಗ ಅವನನ್ನು ಅಪಹಾಸ್ಯ ಮಾಡಿದನು. ಅದರಿಂದ ವಿಶ್ವನಂದಿಯು ಕೋಪಗೊಂಡು, ಸತ್ತನಂತರ ಹತ್ತನೇ ಸ್ವರ್ಗದಲ್ಲಿ ದೇವನಾದನು.

ಆ ದೇವನು ಅಲ್ಲಿಯ ಕಾಲ ಮುಗಿದ ಬಳಿಕ ಪೋದನಪುರದ ಅಧಿಪತಿಯಾದ ಬಾಹುಬಲಿಗೆ ತ್ರಿಪೃಷ್ಠನೆಂಬ ಮಗನಾಗಿ ಚಕ್ರವರ್ತಿಯಾದನು. ವಿಶಾಲ ರಾಜ್ಯವನ್ನೂ ಅನುಪಮವಾದ ಸುಂದರಿಯರನ್ನೂ ಅತ್ಯುತ್ತಮವಾದ ಸಾಮಗ್ರಿಗಳನ್ನೂ ಅನುಭೋಗಿಸಿ, ಸದಾ ಹಿಂಸಾದಿ ಕೃತ್ಯಗಳಲ್ಲಿಯೇ ನಿರತನಾಗಿದ್ದು ಸತ್ತನಂತರ ನರಕದಲ್ಲಿ ಹುಟ್ಟಿದನು.

ನರಕದಲ್ಲಿನ ಜೀವನಕಾಲ ಕಡೆಯಾಗಲು, ಅಲ್ಲಿಂದ ಹೊರಟು ಪ್ರವಿಪುಲ ಸಿಂಹ ಪರ್ವತದಲ್ಲಿ ಸಿಂಹನಾದನು. ಆಗಿ, ಹಿಂಸೆಯನ್ನೇ ನಡೆಸುತ್ತ ಸತ್ತು, ಪುನಃ ನರಕಕ್ಕೆ ಹೋಗಿ, ಅಲ್ಲಿಂದ ಪುನಃ ವರಾಹವೆಂಬ ಪರ್ವತದಲ್ಲಿ ಸಿಂಹವಾಗಿ ಜನಿಸಿ, ಅಲ್ಲಿ ಕೂಡ ಹಿಂಸೆಯಿಂದಲೇ ಜೀವ ಜರುಗಿಸುತ್ತಿದ್ದನು. ಆದರೆ ಆ ಜೀವದ ಪೂರ್ವಶುಭದ ಉದಯದಿಂದ ಅಮಿತಕೀರ್ತಿ ಮತ್ತು ಅಮಿತಪ್ರಭು ಎಂಬ ಇಬ್ಬರು ಚಾರಣ ಮುನಿಗಳು ಅಲ್ಲಿಗೆ ಬಂದು ಆ ಸಿಂಹಕ್ಕೆ ಧರ್ಮವನ್ನು ಉಪದೇಶಿಸಿ ಅದನ್ನು ಹಿಂಸಾದಿ ಕೆಲಸಗಳಿಂದ ಬಿಡಿಸಿದರು. ಆಗಿನ ಶುಭಭಾವನೆಯ ಪ್ರಭಾವದಿಂದ ಆ ಸಿಂಹ ಸತ್ತನಂತರ ಸೌಧರ್ಮ ಸ್ವರ್ಗದಲ್ಲಿ ಹರಿಧ್ವಜನೆಂಬ ದೇವನಾಯಿತು.

ಅಲ್ಲಿಯ ಕಾಲಾನಂತರ ಕಚ್ಛದೇಶದಲ್ಲಿಯ ಹೇಮಪುರದ ರಾಜನಾದ ಕನಕಾಭನಿಗೆ ಕನಕಧ್ವಜನೆಂಬ ಮಗನಾಗಿ, ಆ ಜನ್ಮದಲ್ಲಿ ಒಬ್ಬ ಮುನಿಯ ಬಳಿ ಧರ್ಮವನ್ನು ಕೇಳಿ, ದಿಗಂಬರೀಯ ದೀಕ್ಷೆಯನ್ನು ಕೈಕೊಂಡು ಶುದ್ಧ ಚಾರಿತ್ರವನ್ನು ಅನುಸರಿಸಿದನು. ಜೀವಿತದ ಕಡೆಗಾಲಕ್ಕೆ ಸಲ್ಲೇಖನ ವ್ರತದಿಂದ ಸತ್ತು ಎಂಟನೆಯ ಸ್ವರ್ಗದಲ್ಲಿ ದೇವನಾದನು. ಆಗ ಆತನಿಗೆ ದೇವಾನಂದ ನೆಂದು ಹೆಸರಿತ್ತು.

ದೇವಾನಂದನು ಆ ಸ್ವರ್ಗದ ಭೋಗಗಳನ್ನು ಸವಿಯುತ್ತಿದ್ದರು ಕೂಡ ವೀತರಾಗನಾದ ಜಿನನನ್ನು ಸದಾ ಹೃದಯದಲ್ಲಿ ಧರಿಸಿದ್ದನು. ಅದರ ಫಲವಾಗಿ ದೇವಾನಂದನು ಸತ್ತನಂತರ ಉಜ್ಜಯಿನೀ ನಗರಿಯಲ್ಲಿ ವ್ರಜಸೇನ ಮಹಾರಾಜನಿಗೆ ಹರಿಷೇಣನೆಂಬ ಮಗನಾಗಿ ಹುಟ್ಟಿ, ಶ್ರಾವಕರ ವ್ರತಗಳನ್ನು ಆಚರಿಸುವುದರ ಜತೆಯಲ್ಲಿಯೇ ರಾಜ್ಯಭಾರವನ್ನೂ ನಡೆಸುತ್ತಿದ್ದನು. ಕಡೆಗೆ ಸುಪ್ರತಿಷ್ಠನೆಂಬ ಮುನಿಯ ಬಳಿ ಸಾಧುವಾಗಿ, ಪರಮ ಚಾರಿತ್ರವನ್ನು ಪಾಲಿಸಿ, ಸಮಾಧಿಯಿಂದ ಜೀವನವನ್ನು ಮುಗಿಸಿ, ಪ್ರೀತಿವರ್ಧನವೆಂಬ ವಿಮಾನದಲ್ಲಿ ದೇವನಾದನು.

ಅಲ್ಲಿ ಅನೇಕ ಪ್ರಕಾರವಾದ ಸುಖಗಳನ್ನು ಸವಿದು, ಅಲ್ಲಿ ಸತ್ತ ಬಳಿಕ ಕ್ಷೇಮದ್ಯುತಿ ನಗರದ ಧನಂಜಯನೆಂಬ ರಾಜನಿಗೆ ಪ್ರಿಯಮಿತ್ರನೆಂಬ ಮಗ ನಾದನು. ಅವನಿಗೆ ಚಕ್ರವರ್ತಿಯ ಸಂಪತ್ತಿತ್ತು, ಬುದ್ಧಿ ವೈಭವಗಳಿದ್ದುವು, ಮಹಾಬಲವಿತ್ತು. ಆದರೂ ಭಕ್ತಿಭಾವದಿಂದ ಜಿನೇಂದ್ರನನ್ನು ಪೂಜೆಮಾಡುತ್ತ ಸಮಸ್ತ ಭೂಮಂಡಲದಲ್ಲಿಯೂ ತನ್ನ ರಾಜ್ಯವನ್ನು ವಿಸ್ತರಿಸಿದನು. ಉತ್ತ ಮೋತ್ತಮವಾದ ಭೋಗಗಳ ರಸವನ್ನು ಸವಿದು, ಕಡೆಗೆ ತೀರ್ಥಂಕರ ಭಗ ವಂತನ ಸಮವಸರಣಕ್ಕೆ ಹೋಗಿ, ಅಲ್ಲಿ ಧರ್ಮವನ್ನು ಕೇಳುತ್ತ ಮೋಕ್ಷ ಮಾರ್ಗವನ್ನು ಕಂಡುಕೊಂಡು ತನ್ನ ಚಕ್ರವರ್ತಿತ್ವವನ್ನು ಹುಲ್ಲಿಗೆ ಸಮನೆಂದು ಭಾವಿಸಿ ಬಿಟ್ಟು, ಕ್ಷೇಮಂಕರನೆಂಬ ಆಚಾರ್ಯನ ಬಳಿ ದೀಕ್ಷಾಗ್ರಹಣ ಮಾಡಿ, ವ್ರತಪೂರ್ವಕವಾಗಿ ಸಾವನ್ನು ಬರಮಾಡಿಕೊಂಡು ರುಚಕವಿಮಾನದಲ್ಲಿ ದೇವನಾದನು.

ಆ ದೇವನು ಅಲ್ಲಿಂದ ಇಳಿದು ಭರತಕ್ಷೇತ್ರದ ನಂದಿವರ್ಧನನೆಂಬ ರಾಜನಿಗೆ ನಂದನನೆಂಬ ಮಗನಾದನು. ರಾಜನು ತನ್ನ ಮಗನಿಗೆ ರಾಜ್ಯಭಾರ ವನ್ನು ಬಿಟ್ಟುಕೊಟ್ಟು ತಾನು ಪಿಹಿತಾಸ್ರವನೆಂಬ ಮುನಿಯ ಬಳಿ ದೀಕ್ಷೆ

ಕೊಂಡನು. ಒಂದು ಸಲ ನಂದನನು ಆ ಮುನಿಯ ಬಳಿ ತನ್ನ ಹಿಂ
ಜನ್ಮಗಳನ್ನು ಕೇಳಿ, ವೈರಾಗ್ಯ ಹುಟ್ಟಲು, ತಾನೂ ದೀಕ್ಷೆ ಪಡೆದು ಮು
ಯಾದನು. ಆಗ, ಶೀಲ ಸಂಯಮ ವ್ರತ ಮೊದಲಾದವನ್ನು ಪಾ
ಸಮಾಧಿಯಿಂದ ದೇಹತ್ಯಾಗ ಮಾಡಿ ಪುಷ್ಪೋತ್ತರವೆಂಬ ವಿಮಾನದ
ದೇವನಾದನು.

ಆ ದೇವನು ತನ್ನ ದೇವಲೋಕದ ಆಯುಸ್ಸು ಮುಗಿದ ಮೇಲೆ ಭಾ
ವರ್ಷದಲ್ಲಿ ಕುಂಡಲನಗರದ ಅಧಿಪತಿಯಾದ ಸಿದ್ಧಾರ್ಥನಿಗೂ ಆತನ ಹೆಂ
ಪ್ರಿಯಕಾರಿಣೀ ದೇವಿಗೂ ಮಗನಾಗಿ ಜನಿಸಿಬಂದು, ತನ್ನ ಅಸಾಧಾರಣವಾ
ಚರ್ಯೆಯಿಂದ ಮಹಾವೀರ ಮೊದಲಾದ ಅನ್ವರ್ಥನಾಮಗಳನ್ನು ಸಂಪಾದಿ
ಜೈನರ ತೀರ್ಥಂಕರ ಪರಂಪರೆಯಲ್ಲಿ ಕಾಲಗಣನೆಯಿಂದ ಅತಿ ಈಚಿನವನೆನಿ
ಜಗತ್ತಿನ ಪ್ರಸಿದ್ಧ ಉಲ್ಕಾಧರರಲ್ಲಿ ಒಬ್ಬನಾದನು.

## ಅವತಾರ ಕಲ್ಯಾಣ

ಮಹಾವೀರನ ಜೀವವು ಹದಿನಾರನೆಯ ಅಚ್ಯುತಸ್ವರ್ಗದಿಂದ ಚ್ಯು
ಹೊಂದುವ ಆರು ತಿಂಗಳಿಗೆ ಮೊದಲು ಸೌಧರ್ಮಸ್ವರ್ಗದ ಇಂದ್ರನ
ಕುಬೇರನನ್ನು ಕರೆದು, "ಕುಬೇರ, ಮಹಾವೀರನ ಜೀವಕ್ಕೆ ಈ ಅಚ್ಯು
ಸ್ವರ್ಗದಲ್ಲಿ ಇನ್ನು ಆರು ತಿಂಗಳು ಆಯುಸ್ಸು ಮಾತ್ರ. ಅನಂತರ ಈ
ಜೀವವು ಭೂಮಿಗೆ ಇಳಿದು ಪ್ರಖ್ಯಾತ ಜ್ಞಾತವಂಶೀಯನೂ ಕಾಶ್ಯಪಗೋತ್ರಿಯು
ಆದ ಕುಂಡಲಪುರದ ಸಿದ್ಧಾರ್ಥ ಮಹಾರಾಜನ ಮನೆಯಲ್ಲಿ ಅವತರಿಸುವುದು
ಆ ಜೀವವನ್ನು ಗರ್ಭದಲ್ಲಿ ಧರಿಸುವ ಪುಣ್ಯವತಿಯಾದ ಪ್ರಿಯಕಾರಿಣಿ
ದೇವಿಯು ವೈಶಾಲಿಯ ರಾಜನಾದ ಚೇಟಕನ ಮಗಳು, ರಾಜಾ ಸಿದ್ಧಾರ್ಥನ
ಪ್ರಿಯ ಪತ್ನಿ. ಈ ಅವತಾರದ ಸಂಬಂಧವಾಗಿ ನೀನು ಇಂದಿನಿಂದ ಆ ಗರ್ಭದ
ಜನನದ ವರೆಗೆ—ಎಂದರೆ ಮುಂದೆ ಹದಿನೈದು ತಿಂಗಳ ಕಾಲ—ಆ ಸಿದ್ಧಾರ್ಥನ
ನಗರವಾದ ಕುಂಡಲಪುರದ ಸುತ್ತ ಹನ್ನೆರಡು ಯೋಜನಗಳ ವರೆಗೂ ಸುಂದರ
ವಾಗಿ ಸಿಂಗರಿಸು. ಅದೇ ಕಾಲದ ವರೆಗೆ ದಿನಕ್ಕೆ ಮೂರು ಬಾರಿ ಆ ರಾಜನ
ಮನೆಯ ಮೇಲೆ ರತ್ನದ ಮಳೆ ಕರೆ" ಎಂದು ತಾನು ಅವಧಿಜ್ಞಾನದಿಂದ
ಕಂಡ ತೀರ್ಥಂಕರನ ಅವತಾರವನ್ನು ತಿಳಿಸಿ ಆತನಿಗೆ ಆಜ್ಞೆಮಾಡಿದನು.
ಕುಬೇರನು ಆ ಆಜ್ಞೆಯನ್ನು ವಹಿಸಿ ಪಾಲಿಸಿದನು.

ಹೀಗೆ ಆರು ತಿಂಗಳು ಕಳೆಯಲು ತೀರ್ಥಂಕರನ ತಾಯಿಯ ಗರ್ಭವನ್ನು ಶುದ್ಧಿಮಾಡುವುದಕ್ಕಾಗಿ ಸೌಧರ್ಮೇಂದ್ರನು ಶ್ರೀ, ಹ್ರೀ, ಧೃತಿ, ಕೀರ್ತಿ, ಬುದ್ಧಿ ಮತ್ತು ಲಕ್ಷ್ಮಿ ಎಂಬ ಅರುವರು ದೇವಿಯರನ್ನು ಕಳುಹಿಸಿಕೊಟ್ಟನು. ಅವರು ಬಂದು ಪ್ರಿಯಕಾರಿಣೀದೇವಿಯ ಗರ್ಭವನ್ನು ಶೋಧಿಸಿ ತೀರ್ಥಂಕರನ ಅವತಾರಕ್ಕೆ ಸಿದ್ಧಮಾಡಿಟ್ಟರು.

ಆಗ, ಇಂದಿಗೆ ೨೫೩೭ ವರ್ಷಗಳ ಹಿಂದೆ, ಆಷಾಢ ಶುದ್ಧ ಷಷ್ಠಿಯಂದು, ಉತ್ತರಾಫಲ್ಗುನೀ ನಕ್ಷತ್ರದಲ್ಲಿ, ಮಹಾವೀರನ ಜೀವವು ಅಚ್ಯುತ ಸ್ವರ್ಗದ ಆಯುಸ್ಸನ್ನು ಮುಗಿಸಿ ಬಂದು ಪ್ರಿಯಕಾರಿಣಿಯ ಗರ್ಭದಲ್ಲಿ ಇಳಿಯಿತು. ಆಗ ಕಲ್ಪವಾಸಿ ದೇವತೆಗಳ ಮನೆಯಲ್ಲಿ ತನಗೆ ತಾನೇ ಘಂಟಾನಾದವಾಯಿತು; ಜ್ಯೋತಿಷೀ ದೇವತೆಗಳ ಮನೆಯಲ್ಲಿ ಸಿಂಹನಾದವಾಯಿತು; ಭವನವಾಸಿಗಳ ಮನೆಯಲ್ಲಿ ಶಂಖನಾದವಾಯಿತು; ವ್ಯಂತರ ದೇವತೆಗಳ ಮನೆಯಲ್ಲಿ ಭೇರೀ ಶಬ್ದವಾಯಿತು. ಸೌಧರ್ಮೇಂದ್ರನು ಕುಳಿತಿದ್ದ ಪೀಠ ಅದುರಿತು. ಆಗ ಸಮಸ್ತ ದೇವತೆಗಳಿಗೂ ತೀರ್ಥಂಕರನ ಅವತಾರವಾಯಿತೆಂಬುದು ತಿಳಿಯಿತು.

ತೀರ್ಥಂಕರನ ಅವತಾರವಾದ ಅದೇ ರಾತ್ರೆ ಪ್ರಿಯಕಾರಿಣೀದೇವಿಯು ಪ್ರತಿ ತೀರ್ಥಂಕರನ ತಾಯಿಯೂ ಕಾಣುವ ಹದಿನಾರು ಶುಭ ಸ್ವಪ್ನಗಳನ್ನು ತಾನೂ ಕಂಡಳು. ಕಂಡು, ತಾನು ಕಂಡುದನ್ನು ಮಾರನೆಯ ದಿನ ತನ್ನ ಪತಿಗೆ ತಿಳಿಸಿದಳು.

ಸಿದ್ಧಾರ್ಥರಾಜನು ಆಕೆಗೆ ಅರ್ಧಾಸನ ಕೊಟ್ಟು ಕುಳ್ಳಿರಿಸಿಕೊಂಡು, ಆಕೆ ಕಂಡ ಸ್ವಪ್ನಗಳನ್ನೆಲ್ಲ ಸಾವಧಾನದಿಂದ ಕೇಳಿ ಸಂತೋಷಪಟ್ಟು "ದೇವಿ, ನೀನು ಕಂಡ ಹದಿನಾರು ಸ್ವಪ್ನಗಳೂ ಶುಭವನ್ನು ಸೂಚಿಸುವುವು. ನೀನು ಪಡೆಯುವ ಮಗನು ತೀರ್ಥಂಕರನಾಗುವನೆಂಬುದನ್ನು ನೀನು ಕಂಡ ಆನೆಯು ಸೂಚಿಸುವುದು. ಬಿಳಿಯ ಗೂಳಿಯನ್ನು ಕಂಡುದರಿಂದ ನಿನ್ನ ಮಗನು ಉತ್ತಮವಾದ ಧರ್ಮವನ್ನು ಪ್ರಚಾರಮಾಡುವನು. ಸಿಂಹವು ನಿನ್ನ ಮುಖವನ್ನು ಪ್ರವೇಶಿಸಿದುದರಿಂದ ನಿನ್ನ ಮಗನು ಪ್ರಭಾವಶಾಲಿಯಾಗುವನು, ವೀರ್ಯವಂತನಾಗುವನು. ಕನಸಿನಲ್ಲಿ ಲಕ್ಷ್ಮೀದೇವಿಯನ್ನು ಕಂಡುದರಿಂದ ನಿನ್ನ ಮಗನಿಗೆ ದೇವತೆಗಳು ಅಭಿಷೇಕಮಾಡುವರು. ನಿನ್ನ ಮಗನು ಸುಗಂಧಮಯವಾದ ಶರೀರವನ್ನು ಪಡೆದು ಯಶಸ್ವಿಯಾಗುವನೆಂಬುದನ್ನು ನೀನು ಕಂಡ

ಎರಡು ಹೂಮಾಲೆ ಹೇಳುವುದು. ನೀನು ಚಂದ್ರನನ್ನು ಕಂಡುದರಿಂದ ನಿ
ಜನಿಸುವವನು ಮೋಹದ ಕತ್ತಲೆಯನ್ನು ಹೋಗಲಾಡಿಸುವನು. ಸೂರ್ಯನ
ಕಂಡುದರಿಂದ ಆತನು ಭವ್ಯಜನರ ಹೃದಯವನ್ನು ಅರಳಿಸಿ ಅಜ್ಞಾನದ ಅ
ಕಾರವನ್ನು ಹರಿಸುವನು. ನೀನು ಕಂಡ ಎರಡು ಮೀನು ನಿನ್ನ ಮಗನ ಅನ
ಸುಖವನ್ನು ಸೂಚಿಸುವುದು. ನಿನ್ನ ಮಗನು ಮಂಗಲಶರೀರಿಯಾಗಿ ಉತ್ತ
ಧ್ಯಾನಿಯಾಗುವನೆಂಬುದನ್ನು ನೀನು ಕಂಡ ಎರಡು ಕುಂಭ ತಿಳಿಸುವುದ
ಮುಂದೆ ನೀನು ಸರೋವರ ಕಂಡೆಯಲ್ಲವೆ! ಅದರಿಂದ ನಿನ್ನ ಬಾಲನು ಜೀವಿಗ
ತೃಷ್ಣೆಯನ್ನು ಕಳೆಯುವನೆಂದು ತಿಳಿ. ಆತನು ಪೂರ್ಣಜ್ಞಾನವನ್ನು ಪ
ಯುವನೆಂಬುದನ್ನು ಸೂಚಿಸಲು ನಿನಗೆ ಸಮುದ್ರದ ಕನಸು ಬಿತ್ತು. ನೀನ
ನೋಡಿದ ಸಿಂಹಾಸನವು ಆತನು ಪಡೆಯುವ ಉತ್ಕೃಷ್ಟ ಪದವನ್ನು ನಿರ್ದೇಶಿಸ
ವುದು. ಆತನು ಸ್ವರ್ಗದಿಂದ ಇಳಿದುಬರುವನೆಂಬುದನ್ನು ನೀನು ಕಂ
ವಿಮಾನ ತಿಳಿಸುವುದು. ಆತನು ಇಲ್ಲಿಯ ಮುಖ್ಯ ತೀರ್ಥವನ್ನು ಮುಂದ
ವರಿಸುವನೆಂಬುದು ನೀನು ಕನಸಿನಲ್ಲಿ ಕಂಡ ನಾಗಭವನದ ಅಭಿಪ್ರಾಯ
ಆತನು ಅನಂತಗುಣಗಳನ್ನು ಪಡೆಯುವನೆಂಬುದನ್ನು ನೀನು ಕಂಡ ರತ್ನ
ರಾಶಿಯು ಕಾಣಿಸಿಕೊಡುವುದು. ಕಡೆಯದಾಗಿ ನೀನು ಕಂಡ ಹೊಗೆಯಿಲ್ಲದ
ಬೆಂಕಿಯಿಂದ ಆತನು ಸಮಸ್ತ ಕರ್ಮಗಳನ್ನೂ ನಾಶಮಾಡುವನೆಂದು ತಿಳಿದು
ಬರುವುದು" ಎಂದು ಆ ಆ ಸ್ವಪ್ನಗಳ ಫಲವನ್ನು ತಿಳಿಸಿದನು. ಅದನ್ನು ಕೇಳ
ದೇವಿಯು ಆನಂದಿಸಿದಳು.

ಇತ್ತ, ತೀರ್ಥಂಕರನ ಅವತಾರವಾದುದನ್ನು ಸೌಧರ್ಮೇಂದ್ರನು ತನ್ನ
ಅವಧಿಜ್ಞಾನದಿಂದ ಕಂಡುಕೊಂಡು, ಸಮಸ್ತ ದೇವತೆಗಳೊಡನೆ ಸಂಭ್ರಮದಿಂದ
ಹೊರಟು ಸಿದ್ಧಾರ್ಥ ಮಹಾರಾಜನ ಮನೆಗೆ ಬಂದು, ತೀರ್ಥಂಕರನ ತಾಯಿ
ತಂದೆಯರಿಗೆ ವಿಶೇಷ ವಿಜೃಂಭಣೆಯಿಂದ ಅಭಿಷೇಕಮಾಡಿ ತಾಯ ಗರ್ಭ
ದಲ್ಲಿದ್ದ ತೀರ್ಥಂಕರಸ್ವಾಮಿಯನ್ನು ಅನೇಕ ವಿಧವಾಗಿ ಸ್ತುತಿಸಿದನು.
ಅನಂತರ ರುಚಕದ್ವೀಪದಲ್ಲಿದ್ದ ಐವತ್ತಾರು ಮಂದಿ ದಿಕ್ಕುಮಾರಿಯರನ್ನು
ಕರೆಸಿ ತೀರ್ಥಂಕರನ ತಾಯಿಯ ಸೇವೆಗೆ ನಿಲ್ಲಿಸಿದನು. ಅನಂತರ ಸಮಸ್ತ
ದೇವತೆಗಳೂ ತಮ್ಮ ತಮ್ಮ ಸ್ಥಾನಗಳಿಗೆ ಹೋದರು.

ನೀರಿನಲ್ಲಿದ್ದರೂ ನೀರು ಸೋಕದ ಕಮಲದಂತೆ ತೀರ್ಥಂಕರನು ತಾಯ
ಗರ್ಭದಲ್ಲಿ ಅಲಿಪ್ತನಾಗಿ ಒಂಬತ್ತು ತಿಂಗಳು ಇದ್ದನು. ಆ ಒಂಬತ್ತು ತಿಂಗಳೂ

ದಿಕ್ಕುಮಾರಿಯರು ತಾಯಿಗೆ ವಿಧವಿಧವಾದ ಸೇವೆ ಮಾಡುತ್ತಿದ್ದರಲ್ಲದೆ ಸಂಗೀತ ಸಾಹಿತ್ಯ ಮೊದಲಾದ ಅನೇಕ ಕಲೆಗಳಿಂದ ಆಕೆಯ ಮನಸ್ಸನ್ನು ಸಂತೋಷಪಡಿಸುತ್ತಿದ್ದರು.

## ಜನ್ಮ ಕಲ್ಯಾಣ

ಪ್ರಿಯಕಾರಿಣೀ ದೇವಿಗೆ ಒಂಬತ್ತು ತಿಂಗಳು ತುಂಬಿತು. ಆಗ, ಚೈತ್ರ ಶುಕ್ಲ ತ್ರಯೋದಶಿಯ ರಾತ್ರಿಯ ಕಡೆಯಲ್ಲಿ ಉತ್ತರಾಫಲ್ಗುನೀ ನಕ್ಷತ್ರದಲ್ಲಿ ಮಹಾವೀರಸ್ವಾಮಿಯ ಜನನವಾಯಿತು. ಆಗ ಸರ್ವತ್ರ ಜಯಜಯಕಾರ ವೆದ್ದಿತು. ಸ್ವರ್ಗವಾಸಿಗಳಲ್ಲಿ ಘಂಟಾನಾದವೂ ಜ್ಯೋತಿಷಿಗಳಲ್ಲಿ ಸಿಂಹ ನಾದವೂ ಭವನವಾಸಿಗಳಲ್ಲಿ ಶಂಖನಾದವೂ ವ್ಯಂತರರಲ್ಲಿ ಭೇರಿಯೂ ತನ್ನ ಷ್ಟಕ್ಕೆ ತಾನೇ ಕೇಳಿಸಿತು. ಸೌಧರ್ಮೇಂದ್ರನ ಪೀಠ ಅದುರಿತು. ಆಗ ಸಮಸ್ತ ದೇವತೆಗಳೂ ತೀರ್ಥಂಕರನ ಜನನವಾಯಿತೆಂದು ತಿಳಿದರು. ತೀರ್ಥಂಕರನು ತಾಯ ಗರ್ಭಕ್ಕೆ ಅವತರಿಸಿದ ದಿನ ಮೊದಲುಗೊಂಡು ಸಿದ್ಧಾರ್ಥರಾಜನಿಗೂ ಇತರ ಕುಟುಂಬಿ ಜನಕ್ಕೂ ಸಂಪತ್ತು ವೃದ್ಧಿಯಾಯಿತು; ಅವರ ತೇಜಸ್ಸು, ಯಶಸ್ಸು, ವೈಭವ, ಪರಾಕ್ರಮಗಳು ವರ್ಧಿಸಿದುವು. ತಾಯ ವರ್ಚಸ್ಸೂ ಪ್ರತಿಭೆಯೂ ದಿನದಿನಕ್ಕೆ ಹೆಚ್ಚಾಗಿ ಬೆಳೆಯಿತು. ಅವಳು ಅನೇಕ ಗೂಢವಾದ ಪ್ರಶ್ನೆಗಳಿಗೆ ಸಹಜವಾಗಿ ಉತ್ತರ ಕೊಡಬಲ್ಲವಳಾದಳು. ರಾಜ್ಯದ ಪ್ರಜೆಗಳಿಗೆ ಕೂಡ ಸುಖ ಶಾಂತಿ ಸಂಪತ್ತುಗಳು ಅಧಿಕವಾದವು. ಇದಕ್ಕೆಲ್ಲ ಗರ್ಭದಲ್ಲಿನ ಬಾಲನ ಪ್ರಭಾವವೇ ಕಾರಣವೆಂದು ತಿಳಿದು ಸರ್ವರೂ ಆ ಮಗು ಹುಟ್ಟಿದಾಗ ಆದಕ್ಕೆ **"ವರ್ಧಮಾನ"** ಎಂಬ ಸಾರ್ಥಕವಾದ ಹೆಸರನ್ನಿಟ್ಟರು.

ತೀರ್ಥಂಕರನು ಜನಿಸಿದುದನ್ನು ಸೌಧರ್ಮೇಂದ್ರನು ತನ್ನ ಅವಧಿಜ್ಞಾನ ದಿಂದ ತಿಳಿದು, ಭಗವಂತನ ಜನ್ಮಾಭಿಷೇಕ ಕಲ್ಯಾಣವನ್ನು ನೆರವೇರಿಸುವುದ ಕ್ಕಾಗಿ ತನ್ನ ಐರಾವತ ಆನೆಯನ್ನು ಏರಿ ಕುಂಡಲಪುರಕ್ಕೆ ಹೊರಟನು. ಜೊತೆಯಲ್ಲಿ ನಾಲ್ಕು ತೆರದ ದೇವನಿಕಾಯವೂ ಹೊರಟಿತು. ಅಭಿಷೇಕಕ್ಕಾಗಿ ತೀರ್ಥಂಕರ ಶಿಶುವನ್ನು ತರಲು ಇಂದ್ರಾಣಿಯು ಹೆರಿಗೆ ಮನೆಯ ಒಳಹೊಕ್ಕಳು. ಮಗುವಿನ ಅಗಲಿಕೆಯಿಂದ ತಾಯಿಗೆ ದುಃಖವಾಗಬಾರದೆಂದು ಎಣಿಸಿ ಪ್ರಿಯಕಾರಿಣಿಗೆ ಸುಖನಿದ್ರೆ ಬರಿಸಿ, ಆಕೆಯ ಬಳಿಯಲ್ಲಿ ಒಂದು ಮಾಯಾ ಶಿಶುವನ್ನು ಮಲಗಿಸಿ, ಇಂದ್ರಾಣಿಯು ಭಗವಂತನನ್ನು ಎತ್ತಿ ತಂದು ಐರಾವತದ

ಮೇಲೆ ಇಂದ್ರನ ತೋಳಲ್ಲಿ ಮಲಗಿಸಿದಳು. ಇಂದ್ರನು ಭಗವಂತನ ಸುಂದ
ರೂಪವನ್ನು ನೋಡಲು ಸಾವಿರ ಕಣ್ಣು ಮಾಡಿಕೊಂಡು "ಸಹಸ್ರಾಕ್ಷ
ನಾದರೂ ಆತನ ರೂಪತೃಪ್ತಿ ಆರಲಿಲ್ಲ. ಆಗ ಸರ್ವ ದೇವತೆಗಳೂ ತಮ
ತಮ್ಮ ವಿಮಾನ ವಾಹನಗಳನ್ನು ಏರಿ ಸಂಭ್ರಮದಿಂದ ಆಕಾಶಮಾರ್ಗದ
ಹೊರಟು, ಸುಮೇರು ಪರ್ವತದ ತುದಿಯ ಪಾಂಡುಕ ವನಕ್ಕೆ ಹೋಗಿ
ಅಲ್ಲಿಯ ಅರ್ಧ ಚಂದ್ರಾಕಾರದ ಪಾಂಡುಕ ಶಿಲೆಯ ನಡುವೆ ವಿರಾಜಿಸುತ್ತಿರ
ರತ್ನ ಸಿಂಹಾಸನದಲ್ಲಿ ಭಗವಂತನನ್ನು ಇಳಿಸಿದರು. ಇಂದ್ರನು ಐದನೆಯ
ಕ್ಷೀರಸಾಗರದಿಂದ ಸಾವಿರದೆಂಟು ಕಲಶಗಳಲ್ಲಿ ಹಾಲು ತರಿಸಿ ಭಗವಂತನಿ
ಜನ್ಮಾಭಿಷೇಕವನ್ನು ನಡೆಸಿದನು. ಆ ಅಭಿಷೇಕ ಕಾಲದಲ್ಲಿ ಕೆಲವು ಹಾಲಿ
ಹನಿಗಳು ಭಗವಂತನ ಮೂಗಿನ ಒಳಗೆ ಹೋದವು. ಆಗ ಭಗವಂತನು ಸೀಂ
ಸೀನಿಗೆ ಸಮಸ್ತ ದೇವತೆಗಳೂ ತರಗೆಲೆಗಳಂತೆ ಹಾರಿಹೋದರು. ಬಾಲಕ
ಆ ಅದ್ಭುತ ಪರಾಕ್ರಮವನ್ನು ಕಂಡು ದೇವತೆಗಳು ಆತನಿಗೆ "**ವೀರನಾಥ**
ಎಂಬ ಸಾರ್ಥಕವಾದ ಹೆಸರನ್ನಿಟ್ಟರು.

ಸೌಧರ್ಮೇಂದ್ರನು ಬಳಿಕ ಭಗವಂತನನ್ನು ವಸ್ತ್ರಾಭರಣಗಳಿಂ
ಅಲಂಕರಿಸಿ, ಸ್ತುತಿಸಿ, ಪುನಃ ಐರಾವತದ ಮೇಲೆ ಕೂರಿಸಿಕೊಂಡು ಬಂದು
ಕುಂಡಲಪುರದಲ್ಲಿ ತಾಯಿಯ ಮಾಯಾ ನಿದ್ರೆಯನ್ನು ಹರಿಸಿ ಮಗುವನ್ನು
ಆಕೆಗೆ ಒಪ್ಪಿಸಿದನು. ಮಗನ ವೈಭವವನ್ನು ಕಂಡು ತಾಯಿ ತಂದೆಗೆ ಅ
ಶಯ ಆನಂದವೂ ಆಶ್ಚರ್ಯವೂ ಆಯಿತು. ಆಗ ಇಂದ್ರನು ಆ ತಾಯಿತಂದೆ
ದೇವಲೋಕದಿಂದ ತಂದ ಆಭರಣ ಅಲಂಕಾರಗಳನ್ನು ಸಮರ್ಪಿಸಿ, ಅ
ರೆದುರು ತಾಂಡವ ನೃತ್ಯವಾಡಿ, ಭಗವಂತನನ್ನು ಸ್ತುತಿಸಿ, ಆತನಿಗೆ ನಮಸ್ಕರಿ
ಜನ್ಮೋತ್ಸವವನ್ನು ಮುಗಿಸಿಕೊಂಡು ಹಿಂದಿರುಗಿದನು. ಸಮಸ್ತ ದೇವತೆಗಳ
ತಮ್ಮ ತಮ್ಮ ಸ್ಥಾನಕ್ಕೆ ಹೋದರು.

ಭಗವಂತನು ಹುಟ್ಟಿದಾಗಿನಿಂದಲೂ ಸಕಲ ತೀರ್ಥಂಕರರಂತೆಯ
ಹತ್ತು ಲಕ್ಷಣಗಳನ್ನು ಪಡೆದಿದ್ದನು. (೧) ಆತನ ದೇಹವು ಅತಿಶಯ ಸುಂದ
ವಾಗಿತ್ತು. (೨) ಆ ದೇಹದಿಂದ ಸಹಜವಾದ ಸುಗಂಧವು ಹೊರಸೂಸುತ್ತಿತ್ತು
(೩) ಆ ದೇಹದಲ್ಲಿ ಬೆವರು ಹುಟ್ಟುತ್ತಿರಲಿಲ್ಲ, (೪) ಮಲ ಮೂತ್ರಗಳು ಉತ್ಪನ
ವಾಗುತ್ತಿರಲಿಲ್ಲ. (೫) ಆತನ ಮಾತು ಮೃದುವಾಗಿತ್ತು, ಮಧುರವಾಗಿತ್ತು
ಯಾರನ್ನೂ ನೋಯಿಸುತ್ತಿರಲಿಲ್ಲ. (೬) ಆತನ ಶಕ್ತಿ ಅಪಾರವಾಗಿತ್ತು

(೭) ಆತನ ರಕ್ತ ಹಾಲಿನಂತೆ ಸ್ವಚ್ಛವಾಗಿತ್ತು. (೮) ಆತನ ದೇಹದಲ್ಲಿ ೧೦೦೮ ಶುಭ ಚಿಹ್ನೆಗಳಿದ್ದವು. (೯) ಆತನ ಅಂಗಾಂಗಗಳ ಪ್ರಮಾಣ ಸಮವಾಗಿ ಹೊಂದಿಕೊಂಡಿತ್ತು. (೧೦) ಆತನ ಮೂಳೆ, ಮಾಂಸ, ಕೀಲುಗಳು ವಜ್ರ ದಂತೆ ಅಭೇದ್ಯವಾಗಿದ್ದವು.

ಭಗವಂತನಿಗೆ ಹುಟ್ಟಿದಾಗಲೇ ಮತಿ ಶ್ರುತಿ ಅವಧಿ ಎಂಬ ಮೂರು ತೆರದ ಜ್ಞಾನವಿತ್ತು. ಒಮ್ಮೆ ಸಂಜಯ ಮತ್ತು ವಿಜಯ ಎಂಬ ಇಬ್ಬರು ಚಾರಣ ಮುನಿಗಳು ಯಾವುದೋ ತತ್ವಾರ್ಥ ವಿಷಯದಲ್ಲಿ ತಮಗಿದ್ದ ಸಂದೇಹವನ್ನು ಪರಿಹರಿಸಿಕೊಳ್ಳಲಾರದೆ ಬಹು ಪೇಚಾಡುತ್ತಿದ್ದರು. ಆಗ ಭಗವಂತನು ಹುಟ್ಟಿ ಕೆಲವು ದಿನ ಮಾತ್ರವಾಗಿತ್ತು. ಆ ಸಮಯದಲ್ಲಿ ಆ ಮುನಿಗಳು ಭಗವಂತ ನನ್ನು ಕಂಡ ಮಾತ್ರದಿಂದ ಅವರ ಸಂದೇಹಗಳೆಲ್ಲ ತಿಳಿಯಾದುವು. ಆಗ ಮುನಿಗಳು ಭಗವಂತನ ಪ್ರಭಾವಕ್ಕೆ ಅತಿ ಆನಂದಿಸಿ ಭಗವಂತನಿಗೆ "**ಸನ್ಮತಿ**" ಎಂಬ ಸಾರ್ಥಕವಾದ ಹೆಸರನ್ನಿಟ್ಟು ಹೋದರು.

ಇಂದ್ರನು ಬಂದಾಗ ಭಗವಂತನ ಬೆರಳಿನಲ್ಲಿ ಅಮೃತವನ್ನು ಇಟ್ಟು ಹೋಗಿದ್ದನು. ಅದರಿಂದ ಭಗವಂತನಿಗೆ ತಾಯಿ ಮೊಲೆಯೂಡಬೇಕಾಗಿರ ಲಿಲ್ಲ, ಬೆರಳಿನ ಅಮೃತದಿಂದಲೇ ಆತನು ಬೆಳೆಯುತ್ತಿದ್ದನು. ಆತನಿಗೆ ಬೇಕಾದ ದಿನ ದಿನದ ವಸ್ತ್ರಾಲಂಕಾರಗಳನ್ನು ದೇವತೆಗಳು ಒದಗಿಸುತ್ತಿದ್ದರು. ದೇವತೆಗಳು ಆತನಿಗೆ ಸಮವಾದ ಶರೀರವನ್ನು ತಾಳಿ ಅವನೊಡನೆ ಆಟವಾಡು ತ್ತಿದ್ದರು. ಅವನ ಅಲೌಕಿಕ ಆಟಪಾಟಗಳನ್ನು ಕಂಡು ತಾಯಿಗೆ ಅದ್ಭುತವಾದ ಆನಂದವಾಗುತ್ತಿತ್ತು. ಹೀಗಿರಲು, ಭಗವಂತನು ಚಂದ್ರನಂತೆ ಬೆಳೆಯುತಿದ್ದನು.

ಭಗವಂತನು ಬಾಲನಾಗಿರುವಾಗ ಒಂದು ಸಲ ಸಮವಯಸ್ಸಿನ ಬಾಲ ರೊಡನೆ ವನದಲ್ಲಿ ಮರ ಹತ್ತಿ ಆಟವಾಡುತ್ತಿದ್ದನು. ಆಗ ಸಂಗಮನೆಂಬ ದೇವತೆಯು ಮಹಾ ಕೃಷ್ಣಸರ್ಪದ ರೂಪಿನಿಂದ ಆ ವನವನ್ನು ಪ್ರವೇಶಿಸಿ ಭಗ ವಂತನು ಜೊತೆ ಬಾಲಕರೊಡನೆ ಏರಿದ್ದ ವೃಕ್ಷವನ್ನು ಸುತ್ತಿಕೊಂಡು ಮೇಲೆ ಹತ್ತಿದನು. ಆ ಕರಿಯ ಹಾವನ್ನು ಕಂಡು ಹೆದರಿಕೊಂಡು ಭಗವಂತನ ಜೊತೆಯವರೆಲ್ಲ ತಾವು ಇದ್ದಿದ್ದ ಕಡೆಯಿಂದಲೇ ಧುಮುಕಿ ಓಡಿಹೋದರು. ಆದರೆ ಭಗವಂತನು ಮಾತ್ರ ಇಷ್ಟಿಷ್ಟೂ ಭಯಗೊಳ್ಳದೆ ಆ ಹಾವಿನ ಹೆಡೆಯ ಮೇಲೆ ತನ್ನೆರಡೂ ಕಾಲುಗಳನ್ನಿಟ್ಟು ಲೀಲೆಯಿಂದ ಕೆಳಗಿಳಿದನು. ಸಂಗಮನ ಮದ ಮರ್ದನವಾಯಿತು. ಸಂಗಮನು ಭಗವಂತನ ಅಸಾಧಾರಣವಾದ

ಧೈರ್ಯಕ್ಕೆ ಆಶ್ಚರ್ಯಪಟ್ಟು ಆತನಿಗೆ "ಮಹಾವೀರ" ಎಂಬ ಸಾರ್ಥಕವಾದ ಹೆಸ
ನ್ನಿಟ್ಟು ಹೋದನು.

ಮತ್ತೊಂದು ಸಲ ಭಗವಂತನು ತನ್ನ ಸಮವಯಸ್ಸಿನ ಬಾಲಕರಾ
ಬಂದ ದೇವತೆಗಳೊಡನೆ ಆಡುತ್ತಿರುವಾಗ, ದೇವತೆಗಳು ಒಂದು ಮಾಯೆ
ಆನೆಯನ್ನು ವೀರಪ್ರಭುವಿನ ಎದುರು ತಂದರು. ಜೊತೆಯವರೆಲ್ಲರ
ಭಯಭೀತರಾಗಿ ಅತ್ತ ಇತ್ತ ಓಡಿ ಹೋದರಲ್ಲದೆ ಆನೆಯ ಬಳಿ ಯಾರ
ಹೋಗವ್ವೊಲ್ಲರು. ಆದರೆ ಭಗವಂತನು ಮಾತ್ರ ಧೈರ್ಯವಾಗಿ ಆ ಆನೆಯ ಬ
ಸಾರಿ ಅದನ್ನು ಕೈಯಿಂದ ಹಿಡಿದು ಅದರ ಮೇಲೇರಿ ಕುಳಿತನು. ಅದನ್
ಕಂಡು ಸರ್ವರಿಗೂ ಆಶ್ಚರ್ಯವಾಯಿತು. "ವೀರ, ನಿನ್ನ ಸಮನಾದ ಬಲಶಾ
ಯಿಲ್ಲ, ನಿನ್ನಂತಹ ಪರಾಕ್ರಮಿಯಿಲ್ಲ, ನಿನಗೆಣೆಯಾದ ಧೀರನಿಲ್ಲ" ಎಂದ
ಭಗವಂತನನ್ನು ಪ್ರಶಂಸಿಸಿದರು.

ಭಗವಂತನು ತನ್ನ ಎಂಟನೆಯ ವಯಸ್ಸಿನಲ್ಲಿಯೆ ಶ್ರಾವಕನಾಗಿ ಅಹಿಂಸೆ
ಸತ್ಯ, ಅಚೌರ್ಯ, ಕುಶೀಲತ್ಯಾಗ ಮೊದಲಾದ ಹನ್ನೆರಡು ವ್ರತಗಳನ್
ಸ್ವೀಕರಿಸಿದನು.

ಭಗವಂತನು ಯೌವನಕ್ಕೆ ಕಾಲಿಟ್ಟನು. ಆತನು ಮದುವೆಮಾ
ಕೊಳ್ಳಬೇಕೆಂದು ತಾಯಿತಂದೆಯರು ಬಹು ಬಲವಂತಮಾಡಿದರು. ಆದರೂ
ಪ್ರಭುವು ವಿವಾಹಕ್ಕೆ ಸಮ್ಮತಿಸದೆ ಬಾಲಬ್ರಹ್ಮಚಾರಿಯಾಗಿಯೇ ಇರಲ
ನಿಶ್ಚಯಮಾಡಿದನು.

ಭಗವಂತನಿಗೆ ಮೂವತ್ತು ವರ್ಷವಾದಾಗ ಆತನಿಗೆ ಕ್ಷಾಯಿಕ ಸಮ್ಯಕ್ತ್ವ
ಪ್ರಾಪ್ತವಾಯಿತು. ಆಗ ವೈರಾಗ್ಯ ಹುಟ್ಟಿತು. ಆಗ ಆತನು ದ್ವಾದಶ ಅನು
ಪ್ರೇಕ್ಷೆಗಳನ್ನು ಚಿಂತಿಸತೊಡಗಿದನು.

## ಪರಿನಿಷ್ಕ್ರಮಣ ಕಲ್ಯಾಣ

ಈ ರೀತಿಯಲ್ಲಿ ವೈರಾಗ್ಯ ಹುಟ್ಟಿ ಭಗವಂತನು ಅನುಪ್ರೇಕ್ಷೆಗಳನ್ನು
ಚಿಂತಿಸತೊಡಗಿದಾಗ ಐದನೆಯ ಬ್ರಹ್ಮಸ್ವರ್ಗದ ಲೋಕಾಂತಿಕ ದೇವರುಗಳು
ಬಂದು ಭಗವಂತನಿಗೆ ಮೂರು ಪ್ರದಕ್ಷಿಣೆಮಾಡಿ ನಮಸ್ಕರಿಸಿ, "ಪ್ರಭೂ,
ನೀನು ದೀಕ್ಷೆಯನ್ನು ಕೈಕೊಳ್ಳಲು ಸಂಕಲ್ಪಿಸಿರುವುದು ಪ್ರಶಂಸನೀಯವು.
ಇಂತಹ ಕಾರ್ಯವನ್ನು ನೀನಲ್ಲದೆ ಮತ್ತಾರು ಮಾಡಲಾಪರು! ಈ ವೈರಾಗ್ಯ

ದಿಂದ ನೀನು ಧನ್ಯ" ಇತ್ಯಾದಿಯಾಗಿ ಆತನ ಸಂಕಲ್ಪವನ್ನು ಸ್ತುತಿಸಿ, ಆತನ ನಿಶ್ಚಯವನ್ನು ದೃಢಪಡಿಸಿ ಹೋದರು.

ಭಗವಂತನು ಇಷ್ಟು ಚಿಕ್ಕ ವಯಸ್ಸಿನಲ್ಲಿಯೇ ದಿಗಂಬರೀ ದೀಕ್ಷೆಯನ್ನು ಕೈಕೊಳ್ಳುವನೆಂಬುದನ್ನು ಕೇಳಿ ಮನೆಯವರೆಲ್ಲರಿಗೂ ಬಹು ದುಃಖವಾಯಿತು. ತಾಯಿಯು ಪುತ್ರವಾತ್ಸಲ್ಯದಿಂದ ಶೋಕಪಡುತ್ತ, "ಕಂದ, ನಿನಗೆ ಇದುವರೆಗೆ ಮೈಮೇಲೆ ಬಿಸಿಲು ಕೂಡ ತಾಗಿದುದಿಲ್ಲ. ಈಗ ಹೀಗೆ ದಿಗಂಬರನಾಗಿ ಹೇಗೆ ತಾನೆ ತಾಪವನ್ನು ತಾಳೀಯೆ? ನಿನ್ನ ಶರೀರವು ಬಹು ಸುಕುಮಾರವಾದುದು; ಸಂಯಮವೆಂಬುದು ಅತಿ ತೀಕ್ಷ್ಣವಾದ ಖಡ್ಗ. ನೀನು ನಮ್ಮ ಮನೆಯಲ್ಲಿದ್ದುದರಿಂದ ಇಂದ್ರಾದಿಗಳು ನಮ್ಮ ಮನೆಗೆ ಬಂದು ನಮ್ಮ ಶೋಭೆ ಹೆಚ್ಚುತ್ತಿತ್ತು. ಈಗ ನೀನು ಹೊರಟುಹೋದರೆ ಅವರೇಕೆ ಇಲ್ಲಿ ಬಂದಾರು?" ಎಂದು ಮೋಹದಿಂದ ಗೋಳಾಡಿದಳು. ಭಗವಂತನು ಎಷ್ಟೆಷ್ಟು ಸಮಾಧಾನ ಹೇಳಿದರೂ ಆಕೆಗೆ ಶಾಂತಿ ಬರಲಿಲ್ಲ.

ಆಗ, ಭಗವಂತನ ಪರಿನಿಷ್ಕ್ರಮಣ ಕಲ್ಯಾಣವು ಸಮೀಪಿಸಿತೆಂದು ತನ್ನ ಅವಧಿಜ್ಞಾನದಿಂದ ಕಂಡುಕೊಂಡು ಕುಂಡಲಪುರಕ್ಕೆ ಬಂದಿದ್ದ ಸೌಧರ್ಮೇಂದ್ರನು ಪ್ರಿಯಕಾರಿಣಿಯನ್ನು ಕುರಿತು "ತಾಯಿ, ನಿನ್ನ ಈ ಮಗನು ಜಗನ್ನಾಥನು. ಈ ಸಿಂಹಕ್ಕೆ ಯಾರಿಂದ ಏನು ಭಯ? ಈತನು ಇದುವರೆಗೆ ಅನಂತಕಾಲ ಸಂಸಾರದಲ್ಲಿ ಭ್ರಮಿಸಿ ಈಗ ಕಡೆಯ ಜನ್ಮವೆತ್ತಿರುವನು. ಈತನು ಈ ಜನ್ಮದಲ್ಲಿ ಮುಕ್ತಿಹೊಂದಿ ಸಕಲ ಭವ್ಯಜನಕ್ಕೆ ಮುಕ್ತಿಮಾರ್ಗವನ್ನು ತೋರಿಸುವನು. ಸಕಲ ದುಃಖಗಳಿಂದ ಪಾರಾಗಿ ಶಾಶ್ವತ ಸುಖವನ್ನು ಅನುಭವಿಸುವ ಈ ಪ್ರಭುವಿಗೆ ದುಃಖವಾಗುವುದೆಂದು ಚಿಂತಿಸುವುದು ತರವಲ್ಲ" ಎಂದು ಆಕೆಯನ್ನು ಸಂತೈಸಿದನು.

ಆಗ, ಇಂದ್ರನೊಡನೆ ಬಂದಿದ್ದ ನಾಲ್ಕು ತೆರದ ದೇವಗಣವು ಭಗವಂತನಿಗೆ ಅಭಿಷೇಕಮಾಡಿ, ಚಂದ್ರಪ್ರಭವೆಂಬ ಹೊಸ ಅಪೂರ್ವ ರಚನೆಯ ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು, ಜಯಜಯಕಾರಮಾಡುತ್ತ, ಆ ಪುರದ ಪೂರ್ವದಿಕ್ಕಿನ ಜ್ಞಾತಷಂಡವೆಂಬ ವನಕ್ಕೆ ದೀಕ್ಷೆಗಾಗಿ ಕರೆದೊಯ್ದಿತು. ಅಲ್ಲಿ ಚಂದನವೃಕ್ಷದ ಕೆಳಗೆ ಸ್ಫಟಿಕ ಶಿಲೆಯ ಮೇಲೆ ಒಂದು ಮಂಟಪವನ್ನು ಸೃಜಿಸಿ ಅಲಂಕರಿಸಿದ್ದರು. ಭಗವಂತನು ಆ ಮಂಟಪದಲ್ಲಿ ಹೋಗಿ ಕುಳಿತನು.

ಕುಳಿತು, ಸಕಲ ಪರಿಗ್ರಹಗಳನ್ನೂ ತ್ಯಾಗಮಾಡಿ, ಮೂಲಗುಣಗಳನ್ನು ಧಾರಣಮಾಡಿ, ಸಿದ್ಧರಿಗೆ ನಮಸ್ಕರಿಸಿ ಐದು ಮುಷ್ಟಿಗಳಲ್ಲಿ ತಲೆಗಡ್ಡದ

ಕೂದಲುಗಳನ್ನು ಕಿತ್ತುಹಾಕಿ ಐದು ಮಹಾವ್ರತಗಳನ್ನು ಸ್ವೀಕರಿಸಿದನ
ಇಂದ್ರನು ಸ್ವಾಮಿಯು ಲುಂಚಮಾಡಿಕೊಂಡ ಕೂದಲನ್ನು ಆತುಕೊಂ
ಅದನ್ನು ರತ್ನದ ಪೆಟ್ಟಿಗೆಯಲ್ಲಿಟ್ಟು ಕ್ಷೀರಸಮುದ್ರಕ್ಕೆ ಬಿಟ್ಟನು. ಉಳಿ
ದೇವತೆಗಳೆಲ್ಲರೂ ಭಗವಂತನನ್ನು ಸ್ತುತಿಸಿ ತಮ್ಮ ತಮ್ಮ ನಿವಾಸಗಳಿಗೆ ತೆರ
ದರು. ಹೀಗೆ, ಮಾರ್ಗಶಿರ ಶುದ್ಧ ದಶಮಿಯು ಹಸ್ತಾನಕ್ಷತ್ರದಲ್ಲಿ ಭಗವಂತನ
ತನ್ನ ಮೂವತ್ತನೆಯ ವರ್ಷದಲ್ಲಿ ದಿಗಂಬರೀ ದೀಕ್ಷೆಯನ್ನು ಗ್ರಹಿಸಿದನು.

ಭಗವಂತನ ದೀಕ್ಷಾಗ್ರಹಣ ಕಾಲದಲ್ಲಿ ಅನೇಕ ದೇವ ಮನುಷ್ಯ
ನೆರೆದಿದ್ದರು. ಅವರಲ್ಲಿ ಹಲವರು ಭಗವಂತನ ವೈಭವವನ್ನು ಕಂಡು "ಇಷ
ವೈಭವ ಸಿಗುವುದಾದರೆ, ಯಾರು ತಾನೆ ದೀಕ್ಷೆ ಒಲ್ಲರು!" ಎಂದು ಆಸೆಪಟ
ಪಾಪ ಕಟ್ಟಿಕೊಂಡರು. ಇತರರು ಸಜ್ಜನರು "ಈ ಸಕಲ ವೈಭವಕ್ಕೂ ಈತ
ವೈರಾಗ್ಯವೇ ಮೂಲ ಕಾರಣವಲ್ಲವೆ!" ಎಂದು ಮೆಚ್ಚಿಕೊಂಡು ತಾವೂ ಅನೇ
ತೆರದ ವ್ರತ ನಿಯಮಗಳನ್ನು ಕೈಕೊಂಡರು.

## ತಪಸ್ಸು

ಇತ್ತ, ಭಗವಂತನು ಯೋಗಧಾರಣೆಮಾಡಿ ಪರ್ವತದಂತೆ ನಿಶ್ಚ
ನಾಗಿದ್ದನು. ಪರೀಷಹಗಳನ್ನು ಗೆದ್ದು, ವ್ರತಗಳನ್ನು ಪಾಲಿಸುತ್ತಿದ್ದನು. ಆರ
ತಿಂಗಳು ಒಂದೇ ಕಡೆ ಧ್ಯಾನಮಾಡಿ, ಆದರ ಫಲವಾಗಿ ನಾಲ್ಕನೆಯ ಜ್ಞಾ
ಾದ ಮನಃಪರ್ಯಯಜ್ಞಾನವನ್ನು ಪಡೆಕೊಂಡನು.

ಅಲ್ಲಿಂದ ಮುಂದೆ ಮಳೆಗಾಲದ ನಾಲ್ಕು ತಿಂಗಳು ಎಲ್ಲಿಯೂ ಸಂಚಾ
ಮಾಡದೆ ಒಂದೆಡೆ ತಂಗುತ್ತಿದ್ದನು. ಮಳೆಗಾಲದಲ್ಲಿ ಹಾದಿಯಲ್ಲಿ ಅನೇ
ಕ್ರಿಮಿಕೀಟಗಳು ಉತ್ಪನ್ನವಾಗುವುದನ್ನು ತಿಳಿದು, ತನ್ನ ಸಂಚಾರದಿಂದ ಅವ
ಗಳಿಗೆ ಹಿಂಸೆಯಾಗಬಾರದೆಂಬ ಪ್ರಾಣಿದಯೆಯಿಂದ ಹಾಗೆ ತಂಗುತ್ತಿದ್ದನು.

ಮನಃಪರ್ಯಯಜ್ಞಾನ ಪಡೆದ ಆರು ತಿಂಗಳನಂತರ ಭಗವಂತನು ಕೂ
ಪುರವೆಂಬ ನಗರಕ್ಕೆ ಸಂಚರಿಸಿ ಬಂದನು. ಅಲ್ಲಿಯ ರಾಜನಾದ ಕೂಲನೆಂ
ವನು ಭಗವಂತನನ್ನು ಕಂಡು "ಈತನು ಯಾರೋ ಮಹಾತ್ಮ. ದಾನಕ್
ಉತ್ತಮ ಪಾತ್ರ" ಎಂದು ವಿಚಾರಿಸಿ, ಆತನಿಗೆ ಭಕ್ತಿಪೂರ್ವಕವಾಗಿ ವಂದಿಸಿ
ಊಟಕ್ಕೆ ತನ್ನ ಮನೆಗೆ ಕರೆದೊಯ್ದನು. ಮನೆಯಲ್ಲಿ ಆತನ ಕಾಲು ತೊಳೆದ
ಪೂಜೆಮಾಡಿ ಹಾಲುಅನ್ನದ ಭಿಕ್ಷೆಯನ್ನು ಭಗವಂತನಿಗೆ ಸಮರ್ಪಿಸಿದನು

ಭಗವಂತನ ದೀಕ್ಷಾಗ್ರಹಣದನಂತರ ಇದೆ ಆತನ ಮೊದಲ ಭಿಕ್ಷೆ. ಆ ಸಮಯದಲ್ಲಿ ದೇವತೆಗಳು ಕೂಲನೃಪನ ಮನೆಯ ಮೇಲೆ ಪಂಚಾಶ್ಚರ್ಯಗಳನ್ನು ಪ್ರಕಟಿಸಿದರು. ಭಗವಂತನು ಮುಂದೆ ದಶಪುರಕ್ಕೆ ಹೋದನು. ಅಲ್ಲಿಯೂ ಕೂಲನೃಪನು ಆತನಿಗೆ ಭಿಕ್ಷೆ ನೀಡಿದನು.

ಭಗವಂತನು ಮುಂದೆ ವನಕ್ಕೆ ಹೋಗಿ ಹನ್ನೆರಡು ತೆರದ ತಪಸ್ಸು ಮಾಡತೊಡಗಿದನು. ಅದರ ಫಲವಾಗಿ ಆತನಿಗೆ ಎಂಟು ತೆರದ ಋದ್ಧಿಗಳೂ ಅನೇಕ ತೆರದ ಸಿದ್ಧಿಗಳೂ ಪ್ರಾಪ್ತವಾದವು. ಭಗವಂತನು ಐದು ಮಹಾವ್ರತ ಗಳನ್ನೂ ಐದು ಸಮಿತಿಗಳನ್ನೂ ಮೂರು ಗುಪ್ತಿಗಳನ್ನೂ ೮೪,೦೦೦ ಉತ್ತರ ಗುಣಗಳನ್ನೂ ಪಾಲಿಸುತ್ತಿದ್ದನು.

ಹೀಗೆಯೇ ಸಂಚಾರಮಾಡುತ್ತ ಭಗವಂತನು ಒಮ್ಮೆ ಉಜ್ಜಯಿನೀ ನಗರಿಯ ಸಮೀಪಕ್ಕೆ ಬಂದು 'ಅತಿಮುಕ್ತಕ'ವೆಂಬ ಶ್ಮಶಾನದಲ್ಲಿ ಪ್ರತಿಮಾ ಯೋಗದಲ್ಲಿ ಧ್ಯಾನಸ್ಥನಾದನು. ಆಗ ಸ್ಥಾಣುವೆಂಬ ಹನ್ನೆರಡನೆಯ ರುದ್ರನು ಭಗವಂತನನ್ನು ಕಂಡು ತನ್ನ ಪೂರ್ವಜನ್ಮದ ವೈರವನ್ನು ಸ್ಮರಿಸಿಕೊಂಡು ಭಗ ವಂತನಿಗೆ ನಾನಾ ಉಪಸರ್ಗ ಕೊಟ್ಟನು. ತನ್ನ ವಿದ್ಯೆಯ ಪ್ರಭಾವದಿಂದ ಕರಾಳ ಸ್ವರೂಪವನ್ನು ಧರಿಸಿಕೊಂಡನು. ಒಮ್ಮೆ ದೊಡ್ಡದಾಗಿ ಭಯಂಕರ ವಾಗುವನು. ಅಳುವನು, ಕೂಗುವನು, ನಗುವನು, ಹಾಡುವನು. ದಾಡೆ ಹಲ್ಲುಗಳನ್ನು ಉದ್ದವಾಗಿ ಬೆಳೆಸಿಕೊಂಡು ಮುಖದಿಂದ ಅಗ್ನಿಜ್ವಾಲೆ ಕಾರುತ್ತ ಭಗವಂತನನ್ನು ಹೆದರಿಸತೊಡಗಿದನು. ಆದರೆ ಭಗವಂತನು ಕಿಂಚಿತ್ತೂ ಹೆದರಲಿಲ್ಲ. ಆಗ ರುದ್ರನು ಸಿಂಹದ ರೂಪು ತಾಳಿ ಭಗವಂತನ ಮೇಲೆ ಧಾವಿಸಿದನು. ಭಗವಂತನು ಅಲುಗಾಡಲಿಲ್ಲ. ರುದ್ರನು ಭಯಂಕರವಾದ ಮಾಯಾಸೇನೆಯನ್ನು ಕಲ್ಪಿಸಿಕೊಂಡು ಭಗವಂತನಿಗೆ ತೆರತೆರದ ಉಪಸರ್ಗ ಕೊಟ್ಟನು. ಆದರೂ ಭಗವಂತನು ನಿಶ್ಚಲನಾಗಿದ್ದನು. ಆಗ ರುದ್ರನು ನಾಚಿ ತನ್ನ ಉಪದ್ರವವನ್ನು ನಿಲ್ಲಿಸಿ, ಭಗವಂತನಿಗೆ "ಅತಿ ವೀರ" ಎಂಬ ಸಾರ್ಥಕವಾದ ಹೆಸರನ್ನಿಟ್ಟು, ಆತನಿಗೆ ಸ್ತುತಿಪೂರ್ವಕ ನಮಸ್ಕರಿಸಿ ಹೋದನು.

ಉಜ್ಜಯಿನಿಯಿಂದ ಮುಂದೆ ಭಗವಂತನು ಕೌಶಾಂಬಿಗೆ ಹೋದನು. ಅಲ್ಲಿ ಚಂದನಾ ಎಂಬಾಕೆಯು ಆತನಿಗೆ ಆಹಾರವಿತ್ತಳು. ಈ ಚಂದನಾ ದೇವಿಯು ವೈಶಾಲಿಯ ರಾಜನಾದ ಚೇಟಕನ ಕಿರಿಯ ಮಗಳು. ಸರ್ವಗುಣ

ಸಂಪನ್ನೆಯೂ ಪರಮ ಸುಂದರಿಯೂ ಆದ ಆಕೆಯನ್ನು ಚಿಕ್ಕಂದಿನಲ್ಲಿ ವಿದ್ಯಾಧರನೊಬ್ಬನು ಅಪಹರಿಸಿಕೊಂಡು ಹೋಗಿ, ತನ್ನ ಹೆಂಡತಿಯ ಭಯದಿಂದ ಆಕೆಯನ್ನು ಮಧ್ಯಮಾರ್ಗದ ಕಾಡಿನಲ್ಲಿ ಬಿಟ್ಟುಹೋದನು. ಆಕೆಯ ಗೋಳನ್ನು ಕೇಳಿದ ಬೇಡನೊಬ್ಬನು ಅವಳನ್ನು ಕೌಶಾಂಬಿಯ ಋಷಭಸೇನನೆಂಬ ಧನಿಕನ ಮನೆಗೊಯ್ದನು. ಋಷಭಸೇನನ ಪತ್ನಿಯು ಚಂದನೆಯ ರೂಪಿಗೆ ಮತ್ಸರಿಸಿ ಆಕೆಗೆ ಅನೇಕ ತೆರದ ಕೋಟಲೆಕೊಟ್ಟು ಗೋಳು ಗುಟ್ಟಿಸುತ್ತಿದ್ದಳು. ಹೀಗೆ ಚಂದನೆಯು ತನ್ನ ಪೂರ್ವದುಷ್ಕರ್ಮದ ಫಲವನ್ನು ಅನುಭವಿಸುತ್ತಿದ್ದಾಗ ಮಹಾವೀರ ಸ್ವಾಮಿಯು ಕೌಶಾಂಬಿಗೆ ಬಂದನು. ಚಂದನೆಯು ಭಕ್ತಿಯಿಂದ ಅರ್ಪಿಸಿದ ಆಹಾರವನ್ನು ಸ್ವೀಕರಿಸಿದನು. ಅದರಿಂದ ಆಕೆಯ ಯಶಸ್ಸು ಹರಡಿತು. ಕೌಶಾಂಬಿಯ ರಾಣಿಯಾದ ಮೃಗಾವತಿಯು ಚಂದನೆಯನ್ನು ನೋಡಲು ಕುತೂಹಲಪಟ್ಟು, ಆಕೆಯನ್ನು ಕಂಡಾಗ ಚಿಕ್ಕಂದಿನಲ್ಲಿ ವಿದ್ಯಾಧರನು ಅಪಹರಿಸಿದ ತನ್ನ ಚಿಕ್ಕ ತಂಗಿ ಚಂದನೆಯೇ ಈಕೆಯೆಂದು ಗುರುತಿಸಿ ಸಂತೋಷಪಟ್ಟು, ಆಕೆಯನ್ನು ತನ್ನ ಬಳಿಯೇ ಇರಿಸಿಕೊಂಡಳು.

ಚಂದನೆಯು ನೀಡಿದ ಭಿಕ್ಷೆಯನ್ನುಂಡನಂತರ ಭಗವಂತನು ಪುನಃ ವನಕ್ಕೆ ಹೋಗಿ ಉಪವಾಸ ಧ್ಯಾನಗಳಲ್ಲಿ ನಿರತನಾದನು. ಹೀಗೆ ಹನ್ನೆರಡು ವರ್ಷ ಕಾಲ ನಿಶ್ಚಲನಾಗಿ ಮೌನವ್ರತವನ್ನು ತಾಳಿ ಕಠಿಣವಾದ ತಪಸ್ಸನ್ನು ಅಭ್ಯಾಸಮಾಡಿದನು.

ಭಗವಂತನು ಹೀಗೆ ಹನ್ನೆರಡು ವರ್ಷ ಕಳೆದು, ತನ್ನ ನಲುವತ್ತೆರಡನೆಯ ವರ್ಷದಲ್ಲಿ ಜೃಂಭಿಕಗ್ರಾಮಕ್ಕೆ ಬಂದನು.

## ಕೈವಲ್ಯ ಬೋಧೋತ್ಸವ

ಜೃಂಭಿಕಗ್ರಾಮದ ಬಳಿ ಋಜುಪಾಲಿಕಾ ನದಿ. ಆ ನದಿಯ ದಡದ ಮೇಲೆ ಒಂದು ಶಾಲವೃಕ್ಷ. ಆ ವೃಕ್ಷದ ಅಡಿಯ ಕಲ್ಲಿನ ಮೇಲೆ ಕುಳಿತು, ಭಗವಂತನು ಧ್ಯಾನವೆಂಬ ಖಡ್ಗದಿಂದ ಆತ್ಮದ ಅನಂತ ಗುಣಗಳನ್ನು ಮುಸುಕಿದ್ದ ನಾಲ್ಕು ಘಾತಿಕರ್ಮಗಳನ್ನು ನಾಶಮಾಡಿದನು. ಆಗ, ವೈಶಾಖ ಶುಕ್ಲ ದಶಮಿಯ ಹಸ್ತೋತ್ತರ ಲಗ್ನದಲ್ಲಿ ಭಗವಂತನಿಗೆ ಅನಂತವಸ್ತು ಪ್ರಕಾಶಿಯಾದ ಕೇವಲಜ್ಞಾನವು ಪ್ರಾಪ್ತವಾಯಿತು. ಅನಂತದರ್ಶನ, ಅನಂತ

  

ಜ್ಞಾನ, ಅನಂತವೀರ್ಯ ಮತ್ತು ಅನಂತಸುಖಗಳೆಂಬ ಅನಂತಚತುಷ್ಟಯವು ಆತನಲ್ಲಿ ಉತ್ಪನ್ನವಾಯಿತು.

ಭಗವಂತನಿಗೆ ಕೇವಲಜ್ಞಾನ ಹುಟ್ಟಿದುದನ್ನು ಇಂದ್ರನು ತನ್ನ ಅವಧಿ ಜ್ಞಾನದಿಂದ ತಿಳಿದು, ಆಸನದಿಂದ ಎದ್ದು, ಏಳು ಹೆಜ್ಜೆ ನಡೆದು ಪರೋಕ್ಷ ನಮಸ್ಕಾರ ಮಾಡಿ, ಕುಬೇರನನ್ನು ಕರೆದು "ಕುಬೇರ, ಭಗವಂತನ ಧರ್ಮೋಪ ದೇಶಕ್ಕಾಗಿ ಸಮವಸರಣ ಮಂಟಪವನ್ನು ರಚಿಸು" ಎಂದು ಆಜ್ಞೆಮಾಡಿದನು.

ಸಮವಸರಣ ರಚನೆಯಾದನಂತರ ಸೌಧರ್ಮೇಂದ್ರನು ಸಮಸ್ತ ದೇವತೆ ಗಳೊಡನೆ ಅಲ್ಲಿಗೆ ಹೋಗಿ ಭಗವಂತನಿಗೆ ಮೂರು ಬಾರಿ ನಮಸ್ಕರಿಸಿ, ಆತನನ್ನು ೧೦೦೮ ಹೆಸರುಗಳಿಂದ ಸ್ತೋತ್ರಮಾಡಿದನು.

ಸಕಲ ತೀರ್ಥಂಕರರಿಗಾಗುವಂತೆಯೇ ಕೇವಲಜ್ಞಾನೋತ್ಪತ್ತಿಯಿಂದ ಭಗವಂತನಿಗೂ ಹತ್ತು ವಿಶೇಷಗಳು ಪ್ರಾಪ್ತವಾದುವು: (೧) ಆತನು ತಂಗಿದ ಸ್ಥಳದ ಸುತ್ತ ನೂರು ಯೋಜನ ದೂರ ದುರ್ಭಿಕ್ಷ ತಪ್ಪುತ್ತಿತ್ತು. (೨) ನಡೆ ಯಲಿ, ಕೂರಲಿ, ನಿಲ್ಲಲಿ, ಆತನ ಕಾಲು ನೆಲಕ್ಕೆ ಮುಟ್ಟುತ್ತಿರಲಿಲ್ಲ. (೩) ಆತನು ಹೇಗೆ ನಿಂತಿದ್ದರೂ ಎಲ್ಲ ದಿಕ್ಕಿನವರಿಗೂ ಆತನ ಮುಖ ಕಾಣಿಸುತ್ತಿತ್ತು. (೪) ಅವನ ಬಳಿ ಬಂದವರಲ್ಲೆಲ್ಲ ಹಿಂಸೆಯ ಭಾವನೆ ಮರೆಯಾಗುತ್ತಿತ್ತು. (೫) ಆತನಿಗೆ ಯಾವ ದುಃಖವಾಗಲಿ ಉಪಸರ್ಗವಾಗಲಿ ತಾಗುತ್ತಿರಲಿಲ್ಲ. (೬) ಆತನು ಆಹಾರವಿಲ್ಲದೆ ಜೀವಿಸುತ್ತಿದ್ದನು. (೭) ಆತನಿಗೆ ಸಕಲ ಕಲೆಗಳೂ ಶಾಸ್ತ್ರಗಳೂ ಕರಗತವಾಗಿದ್ದುವು. (೮) ಆತನ ಉಗುರು ಕೂದಲುಗಳು ಬೆಳೆಯುತ್ತಿರಲಿಲ್ಲ. (೯) ಆತನ ಕಣ್ಣ ರೆಪ್ಪೆ ಹೊಯ್ಯುತ್ತಿರಲಿಲ್ಲ. ಮತ್ತು (೧೦) ಆತನ ದೇಹದಿಂದ ನೆರಳು ಬೀಳುತ್ತಿರಲಿಲ್ಲ.

ಅಲ್ಲದೆ, ಆತನ ಕೇವಲಜ್ಞಾನೋತ್ಪತ್ತಿಯ ಫಲವಾಗಿ (೧) ಸರ್ವರಿಗೂ ಅರ್ಧಮಾಗಧೀ ಭಾಷೆ ಅರ್ಥವಾಗುತ್ತಿತ್ತು; (೨) ಆತನ ಬಳಿಯವರಲ್ಲೆಲ್ಲ ಮೈತ್ರೀಭಾವ ಹುಟ್ಟುತ್ತಿತ್ತು; (೩) ಶುಭ್ರವಾದ ಆಕಾಶ; (೪) ಸರ್ವದಿಕ್ಕು ಗಳಲ್ಲೂ; (೫) ಅಕಾಲದ ಹಣ್ಣು ಹೂವು ಹುಟ್ಟುತ್ತಿತ್ತು; (೬) ಸುತ್ತ ಒಂದು ಯೋಜನ ದೂರ ನೆಲ ಚೊಕ್ಕಟವಾಗುತ್ತಿತ್ತು; (೭) ನಡೆಯುವಾಗ ಆತನ ಪಾದದಡಿಯಲ್ಲಿ ದೇವತೆಗಳು ಚಿನ್ನದ ಕಮಲಗಳನ್ನು ಚೆಲ್ಲುತ್ತಿದ್ದರು; (೮) ಸುತ್ತೆಲ್ಲ ಗಗನದಲ್ಲಿ ಜಯಜಯಕಾರವಾಗುತ್ತಿತ್ತು; (೯) ಸುತ್ತ ಸುವಾಸನೆಯ ಗಾಳಿ ಮೃದುವಾಗಿ ಬೀಸುತ್ತಿತ್ತು; (೧೦) ಸುಗಂಧದ ಮಳೆ ಬೀಳುತ್ತಿತ್ತು;

(೧೧) ದೇವತೆಗಳು ದಾರಿಯ ಮುಳ್ಳುಗಳನ್ನು ತೆಗೆಯುತ್ತಿದ್ದರು; (೧೨) ಸಕಲ ಜೀವಿಗಳಿಗೂ ಸಂತೋಷವಾಗುತ್ತಿತ್ತು; (೧೩) ಸಮವಸರಣದ ಮುಂದೆ ಧರ್ಮ ಚಕ್ರ ಹೋಗುತಿತ್ತು; ಮತ್ತು (೧೪) ಛತ್ರ, ಚಾಮರ, ಸ್ವಸ್ತಿಕ, ದರ್ಪಣ, ಕಲಶ, ವರ್ಧಮಾನಕ (ಸುಗಂಧ ಚೂರ್ಣದ ಪೆಟ್ಟಿಗೆ), ಮತ್ತು ಭದ್ರಾಸನಗಳೆಂಬ ಎಂಟು ಮಂಗಳವಸ್ತುಗಳು ಮುಂದೆ ಬರುತ್ತಿದ್ದುವು.

ಆತನಿಗೆ ಕೇವಲಜ್ಞಾನೋತ್ಪತ್ತಿಯಾದುದರ ಪ್ರಭಾವದಿಂದ ಒಂದು ಅಶೋಕವೃಕ್ಷ ಸದಾ ಅವನ ಬಳಿಯಿರುತ್ತಿತ್ತು. ಅಲ್ಲದೆ ಒಂದು ಭದ್ರಾಸನ, ಮೂರು ಛತ್ರ, ಒಂದು ಸಿಂಹಾಸನ, ಒಂದು ಪ್ರಭಾಮಂಡಲ, ಅನಾಕ್ಷರೀವಾಣಿಯೆಂಬ ದಿವ್ಯಧ್ವನಿ, ದೇವಲೋಕದ ಪುಷ್ಪವೃಷ್ಟಿ—ಇವು ಆತನದಾಗಿದ್ದುವು. ಅರುವತ್ತುನಾಲ್ಕು ಜನ ಯಕ್ಷರು ಅವನಿಗೆ ಸದಾ ಚಾಮರವಿಕ್ಕುತ್ತಿದ್ದರು. ಸದಾ ದೇವತೆಗಳ ಗಾಯನ ನಡೆಯುತ್ತಿತ್ತು.

ಇಷ್ಟೆಲ್ಲ ವೈಭವಗಳನ್ನು ಪಡೆದು ಪ್ರಭುವು ಅನಂತದರ್ಶನ, ಅನಂತಜ್ಞಾನ, ಅನಂತವೀರ್ಯ, ಅನಂತಸುಖ ಎಂಬ ಅನಂತಚತುಷ್ಟಯದಿಂದ ರಾರಾಜಿಸುತ್ತಿದ್ದನು.

## ಇಂದ್ರಭೂತಿ ಗೌತಮ

ಸೌಧರ್ಮೇಂದ್ರನ ಆಜ್ಞೆಯಂತೆ ಕುಬೇರನು ಸಮವಸರಣ ಮಂಟಪವನ್ನು ರಚಿಸಿದನಂತರ ಭಗವಂತನ ದಿವ್ಯಧ್ವನಿಯಲ್ಲಿ ಧರ್ಮೋಪದೇಶ ಮೊದಲಾಯಿತು. ಧರ್ಮೋಪದೇಶ ಮಾಡುವಾಗ ಭಗವಂತನ ಮುಖದಲ್ಲಿ ಏನೂ ವಿಕಾರವಾಗುತ್ತಿರಲಿಲ್ಲ, ಆತನ ತುಟಿ ನಾಲಗೆಗಳು ಅಲುಗುತ್ತಿರಲಿಲ್ಲ. ಇಂತಹ ಅಕ್ಷರರಹಿತವಾದ ವಾಣಿಯು, ಈ **ಅನಾಕ್ಷರೀ ವಾಣಿಯು**, ಸಾಮಾನ್ಯರಿಗೆ ಅರ್ಥವಾಗುವಂತಿರಲಿಲ್ಲ. ಆ ದಿವ್ಯವಾಣಿಯನ್ನು ಸ್ವೀಕರಿಸಿ, ಅದನ್ನು ಅರ್ಥಮಾಡಿಕೊಂಡು, ಇತರರಿಗೆ ತಿಳಿಸುವಂತಹ ಪುಣ್ಯಪರಿಪಾಕವುಳ್ಳವನು ಯಾರೂ ಆ ಸಭೆಯಲ್ಲಿ ಆಗ ಇನ್ನೂ ಇರಲಿಲ್ಲ.

ಇದನ್ನು ಸೌಧರ್ಮೇಂದ್ರನು ತಿಳಿದು, ಭಗವಂತನ ದಿವ್ಯ ಧ್ವನಿಯನ್ನು ಗ್ರಹಿಸಿ ವಿಸ್ತರಿಸಬಲ್ಲವನಾರೆಂಬುದನ್ನು ತನ್ನ ಅವಧಿಜ್ಞಾನದಿಂದ ತಿಳಿದು, "ಇಂದ್ರಭೂತಿ ಗೌತಮನೆಂಬ ಬ್ರಾಹ್ಮಣನು ನಾಲ್ಕು ವೇದಗಳನ್ನೂ ಹದಿನೆಂಟು ಪುರಾಣಗಳನ್ನೂ ಸಮಸ್ತ ಶಾಸ್ತ್ರಗಳನ್ನೂ ಬಲ್ಲವನೆಂದು ಪ್ರಸಿದ್ಧನಾದವನು.

ಆದರೆ ಆತನು ಮಹಾ ಅಭಿಮಾನಿ, ಆತನಿಗೆ ಮಹಾ ಗರ್ವ. ಆತನನ್ನು ಏನಾದರೂ ಉಪಾಯದಿಂದ ಇಲ್ಲಿಗೆ ಕರೆತರುವೆನು. ಅವನು ಭಗವಂತನ ದರ್ಶನದಿಂದ ಜೈನಧರ್ಮವನ್ನು ಧರಿಸಿ, ಮೊದಲ ಗಣಧರನಾಗುವನು" ಎಂದು ಆಲೋಚಿಸಿ ಒಂದು ಕಠಿಣವಾದ ಶ್ಲೋಕವನ್ನು ರಚಿಸಿಕೊಂಡು, ವೃದ್ಧ ಬ್ರಾಹ್ಮಣ ವೇಷದಿಂದ ಗೌತಮನು ತನ್ನ ೫೦೦ ಮಂದಿ ಶಿಷ್ಯರೊಡನಿದ್ದ ಬಳಿ ಬಂದು "ನಾನು ಶ್ರೀ ವರ್ಧಮಾನ ಸ್ವಾಮಿಯ ಶಿಷ್ಯ. ಆತನು ನನಗೊಂದು ಶ್ಲೋಕವನ್ನು ಹೇಳಿ, ಅದರ ಅರ್ಥವನ್ನು ತಿಳಿಸುವ ಮೊದಲೇ ಧ್ಯಾನಸ್ಥ ನಾದನು. ನಿನ್ನ ಹೆಸರು ಕೇಳಿ ನಿನ್ನಲ್ಲಿಗೆ ಬಂದಿದ್ದೇನೆ. ಇದರ ಅರ್ಥವನ್ನು ನೀನು ನನಗೆ ಹೇಳಬೇಕು" ಎಂದು ಬೇಡಿಕೊಂಡನು.

ಆಗ ಗೌತಮನು ತನ್ನ ವಿದ್ಯೆಯ ಗರ್ವದಿಂದ "ನಾನು ನಿನ್ನ ಶ್ಲೋಕಕ್ಕೆ ಅರ್ಥ ಹೇಳುತ್ತೇನೆ. ಆದರೆ ನೀನು ನನ್ನ ಶಿಷ್ಯನಾಗಬೇಕು" ಎಂದನು. ಈ ನಡುವೆ ಗೌತಮನ ೫೦೦ ಶಿಷ್ಯರಲ್ಲಿ ಒಬ್ಬನು ಎಲ್ಲರ ಪರವಾಗಿ ಎದ್ದು ನಿಂತು "ನಾವೂ ಒಂದು ಶ್ಲೋಕ ಹೇಳುತ್ತೇವೆ. ನೀನು ಅದರ ಅರ್ಥ ಬಿಡಿಸಿದರೆ ನಾವು ೫೦೦ ಜನರೂ ನಿನ್ನ ಶಿಷ್ಯರಾಗುವೆವು" ಎಂದನು. ಅದಕ್ಕೆ ಇಂದ್ರನು "ನನಗೆ ಅಷ್ಟು ಬುದ್ಧಿಯಿದ್ದಿದ್ದರೆ ಈ ಶ್ಲೋಕದ ಅರ್ಥ ಕೇಳಲು ಇಲ್ಲೇಕೆ ಬರುತ್ತಿದ್ದೆ!" ಎನ್ನಲು, ಗೌತಮನು ತನ್ನ ಶಿಷ್ಯನನ್ನು ಸುಮ್ಮನಿರ ಹೇಳಿ "ನಿನ್ನ ಶ್ಲೋಕವೇನು, ಹೇಳು" ಎಂದು ಇಂದ್ರನಿಗೆಂದನು.

ಆಗ ಬ್ರಾಹ್ಮಣ ವೇಷದ ಇಂದ್ರನು

ತ್ರೈಕಾಲ್ಯಂ ದ್ರವ್ಯಷಟ್ಕಂ ಸಕಗತಿಗಣಾಃ ಸತ್ಪದಾರ್ಥಾ ನವೈವ
ವಿಶ್ವಂ ಪಂಚಾಸ್ತಿಕಾಯ ವ್ರತಸಮಿತಿವಿದಃ ಸಪ್ತತತ್ವಾನಿ ಧರ್ಮಾಃ
ಸಿದ್ಧೇರ್ಮಾರ್ಗಸ್ವರೂಪಂ ವಿಧಿಜನಿತಫಲಂ ಜೀವಷಟ್ಕಾಯ ಲೇಶ್ಯಾಃ
ಏತಾನ್ಯಃ ಶ್ರದ್ದಧಾತಿ ಜಿನವಚನರತೋ ಮುಕ್ತಿಗಾಮೀ ಸ ಭವ್ಯಃ

ಎಂದನು.

ಇಂದ್ರಭೂತಿಗೆ ಆ ಶ್ಲೋಕ ಅರ್ಥವಾಗಲಿಲ್ಲ. ಮೂರು ಕಾಲ ಯಾವುದು? ಆರು ದ್ರವ್ಯ ಯಾವುದು? ನವ ಪದಾರ್ಥಗಳಾವುವು? ಈ ಶ್ಲೋಕ ಯಾವ ಗ್ರಂಥದ್ದು? ಯಾವುದೂ ತಿಳಿಯಲಿಲ್ಲ. "ಈ ಶ್ಲೋಕಕ್ಕೆ ಏನಾದರೂ ಅರ್ಥಮಾಡಿ ಹೇಳಿಬಿಡೋಣವೆಂದರೆ, ಮಹಾವೀರನು ಧ್ಯಾನದಿಂದ ಎದ್ದನಂತರ ನನ್ನ ಪೊಳ್ಳು ಬಯಲಾಗುತ್ತದೆ. ಈತನೆದುರು ಸೋತರೆ ನಗೆಗೀಡಾಗಿ ನನಗೆ

ಅವಮಾನವಾಗುತ್ತದೆ. ಆದರಿಂದ ಮಹಾವೀರನ ಬಳಿಗೆ ಹೋಗುವುದೇ ಲೇಸು. ಆ ಪುರುಷೋತ್ತಮನ ಬಳಿ ಸೋತರೂ ನಷ್ಟವಿಲ್ಲ, ಅವಮಾನವಿಲ್ಲ" ಎಂದು ವಿಚಾರಮಾಡಿ, "ನಿನ್ನ ಗುರುವಿನ ಎದುರಿಗೇ ಇದಕ್ಕೆ ಅರ್ಥ ಹೇಳುವೆನು, ನಡೆ" ಎಂದು ಇಂದ್ರನನ್ನು ಕರೆದುಕೊಂಡು ಮಹಾವೀರನ ಸಮವಸರಣಕ್ಕೆ ನಡೆದನು.

ಇಂದ್ರನ ಮನೋರಥ ಕೈಗೂಡಿತು. ಇಂದ್ರಭೂತಿಯ ಜೊತೆಯಲ್ಲಿ ಆತನ ೫೦೦ ಶಿಷ್ಯರೂ ನಡೆದರು. ಆತನ ತಮ್ಮಂದಿರಾದ ವಾಯುಭೂತಿ ಅಗ್ನಿಭೂತಿಯರು ತಾವೂ ತಮ್ಮ ಐನೂರು ಐನೂರು ಶಿಷ್ಯರೊಡನೆ ಹೊರಟರು.

ಸಮವಸರಣದ ಬಾಗಿಲ ಬಳಿಯ ಮಾನಸ್ತಂಭವನ್ನು ನೋಡಿದ ಕ್ಷಣ ಆಯೆಲ್ಲರ ಮಾನವಡಗಿತು. ಎಲ್ಲರೂ ನಮ್ರರಾಗಿ ಸಮವಸರಣವನ್ನು ಪ್ರವೇಶಿಸಿದರು. ಭಗವಂತನನ್ನು ಕಂಡ ಕ್ಷಣ ಅವರ ಮಿಥ್ಯಾವಿಚಾರ ಮರೆಯಾಯಿತು. ಎಲ್ಲರೂ ಗದ್ಗದಕಂಠರಾಗಿ ಭಕ್ತಿಯಿಂದ ಭಗವಂತನಿಗೆ ಮೂರು ಪ್ರದಕ್ಷಿಣೆ ಮಾಡಿ ನಮಸ್ಕರಿಸಿ ೧೦೦೮ ಹೆಸರುಗಳಿಂದ ಆತನನ್ನು ಸ್ತುತಿಸಿ ಸಮವಸರಣದ ಮನುಷ್ಯಭಾಗದಲ್ಲಿ ಹೋಗಿ ಕುಳಿತರು.

ಆಗ ಇಂದ್ರಭೂತಿಯು "ದೇವ, ತಮ್ಮಿಂದ ಧರ್ಮೋಪದೇಶವಾಗಬೇಕು. ಜೀವತತ್ವದ ಲಕ್ಷಣವೇನು? ಅದರ ಗುಣ ಪರ್ಯಾಯಗಳೇನು? ಸಂಸಾರದ ರೂಪವಾವುದು? ಮೋಕ್ಷದ ಸ್ವರೂಪವೇನು? ಕೃಪೆಯಿಂದ ತಿಳಿಸಬೇಕು" ಎಂದು ಪ್ರಾರ್ಥಿಸಿದನು.

ಆಗ ಭಗವಂತನ ದಿವ್ಯಧ್ವನಿಯಿಂದ ತತ್ವನಿರೂಪಣೆ ಮೊದಲಾಯಿತು. ಸಪ್ತಭಂಗೀ ನ್ಯಾಯದಿಂದ ಪ್ರಾರಂಭವಾಗಿ ಸಪ್ತತತ್ವ, ನವಪದಾರ್ಥ, ಪಂಚಾಸ್ತಿಕಾಯಗಳನ್ನು ಸವಿಸ್ತಾರವಾಗಿ ವರ್ಣಿಸಿದನು. ಮೋಕ್ಷಕ್ಕೆ ಕಾರಣವಾದ ಸಮ್ಯಕ್ತ್ವವನ್ನೂ ಅದರ ಒಳಭೇದಗಳನ್ನೂ ತಿಳಿಸಿದುದಲ್ಲದೆ, ಗೃಹಸ್ಥ ಧರ್ಮ ಮುನಿಧರ್ಮಗಳನ್ನೂ ಭಗವಂತನು ವಿವರಿಸಿದನು.

ಆ ಧರ್ಮೋಪದೇಶವು ಎದೆಗೆ ನಾಟಿ ಇಂದ್ರಭೂತಿಯೂ ಅವನ ಇಬ್ಬರು ತಮ್ಮಂದಿರೂ ತಮ್ಮ ತಮ್ಮ ಶಿಷ್ಯರೊಡನೆ ದಿಗಂಬರೀ ದೀಕ್ಷೆಯನ್ನು ಗ್ರಹಿಸಿ ಜೈನ ಸಾಧುಗಳಾದರು. ಅವರಲ್ಲಿ ಇಂದ್ರಭೂತಿಗೆ ಅಂದೇ ಅವಧಿಜ್ಞಾನವೂ ಮನಃಪರ್ಯಯ ಜ್ಞಾನಗಳೂ ಉಂಟಾದವು. ಅವನು ಭಗವಂತನ ಪ್ರಥಮ ಗಣಧರನಾಗಿ ದ್ವಾದಶಾಂಗ ವಾಣಿಯನ್ನು ರಚಿಸಿದನು.

ಅನಂತರ, ಭಗವಂತನು ಸರ್ವತ್ರ ವಿಹಾರಿಸಿ ಧರ್ಮದ ಮಳೆಗರೆಯ ಬೇಕೆಂದು ಸೌಧರ್ಮೇಂದ್ರನು ಭಗವಂತನನ್ನು ನಮಸ್ಕಾರಪೂರ್ವಕವಾಗಿ ಪ್ರಾರ್ಥಿಸಿದನು. ಅಂತೆಯೇ ಭಗವಂತನು ಧರ್ಮವನ್ನು ವಿಸ್ತರಿಸುತ್ತ ಸರ್ವತ್ರ ಸಂಚರಿಸಿದನು. ಕುಬೇರನು ಮೊದಲಿನ ಸಮವಸರಣವನ್ನು ಲಯಿಸಿ, ಭಗವಂತನು ಎಲ್ಲೆಲ್ಲಿ ಉಪದೇಶಗೆಯ್ದರೆ ಅಲ್ಲಲ್ಲಿ ಸಮವಸರಣವನ್ನು ರಚಿಸ ತೊಡಗಿದನು.

## ಮಹಾವೀರ ಸಂಘ

ಹೀಗೆ ವಿಹರಿಸುತ್ತ, ಒಂದು ಸಲ ಭಗವಂತನ ಸಮವಸರಣವು ಮಗಧದ ರಾಜಗೃಹನಗರದ ಬಳಿ ವಿಪುಲಾಚಲ ಪರ್ವತದ ಮೇಲೆ ತಂಗಿತು. ಅದರ ಪ್ರಭಾವದಿಂದ ಅಲ್ಲಿ ಆರೂ ಋತುಗಳ ಹೂ ಹಣ್ಣು ಕಾಣಿಸಿಕೊಂಡವು. ಆ ಅಪೂರ್ವ ಫಲಪುಷ್ಪಗಳನ್ನು ವನಪಾಲಕನು ಸಂಗ್ರಹಿಸಿ ಮಗಧದ ರಾಜನಾದ ಶ್ರೇಣಿಕ ಬಿಂಬಿಸಾರನಿಗೆ ಅರ್ಪಿಸಿದನು. ರಾಜನು ಆ ಅಕಾಲದ ಕುಯಿಲಿಗೆ ಆಶ್ಚರ್ಯಗೊಂಡು, ಅದು ಸ್ವಾಮಿಯ ಸಮವಸರಣದ ಮಹಿಮೆಯೆಂದು ತಿಳಿದು, ಬಹು ಮುದಗೊಂಡು, ಸಿಂಹಾಸನದಿಂದ ಎದ್ದು, ವಿಪುಲಾಚಲದ ಕಡೆ ಏಳು ಹೆಜ್ಜೆ ನಡೆದು, ಪರೋಕ್ಷ ನಮಸ್ಕಾರಮಾಡಿ, ನಗರದಲ್ಲಿ ಆನಂದ ಭೇರಿ ಹೊಯಿಸಿ, ಪರಿಜನರೊಡನೆ ಭಗವಂತನ ದರ್ಶನಕ್ಕಾಗಿ ಹೊರಟನು. ಬಹು ಸಂಭ್ರಮದಿಂದ ಆನೆಯ ಮೇಲೆ ಹೋಗಿ, ಮಾನಸ್ತಂಭವನ್ನು ಕಂಡೊಡನೆ ಕೆಳಗಿಳಿದು, ಛತ್ರ ಚಾಮರ ಮುಂತಾದ ರಾಜಚಿಹ್ನೆಗಳನ್ನು ಬಿಟ್ಟು ಕಾಲುನಡಿಗೆಯಲ್ಲಿ ಸಮವಸರಣವನ್ನು ಪ್ರವೇಶಿಸಿದನು. ಪ್ರವೇಶಿಸಿ, ಭಗವಂತನಿಗೆ ಮೂರು ಪ್ರದಕ್ಷಿಣೆಮಾಡಿ ನಮಸ್ಕರಿಸಿ, ಸ್ತುತಿಸಿ, ಮನುಷ್ಯ ಸಭೆಯಲ್ಲಿ ಕುಳಿತನು.

ಅಲ್ಲಿ ಭಗವಂತನ ದಿವ್ಯಧ್ವನಿಯನ್ನು ಕೇಳಿದನಂತರ ಶ್ರೇಣಿಕನು ಗೌತಮ ಗಣಧರನನ್ನು ಕುರಿತು "ನಾನು ಹಿಂದೆ ಯಾವ ಯಾವ ಗತಿಯಲ್ಲಿ ಜನಿಸಿದ್ದೆ? ಯಾವ ಪುಣ್ಯದಿಂದ ಈಗ ರಾಜನಾದೆ? ಮುಂದೆ ನನಗೆ ಯಾವ ಗತಿ? ಎಲ್ಲವನ್ನೂ ತಿಳಿಸು" ಎಂದನು.

ಆಗ ಗೌತಮ ಗಣಧರನು ಶ್ರೇಣಿಕನ ಸಮಸ್ತ ಪೂರ್ವಜನ್ಮವನ್ನೂ ವರ್ಣಿಸಿ "ಮುಂದೆ ೮೪೦೦೦ ವರ್ಷಗಳ ವರೆಗೆ ನೀನು ಮೊದಲ ನರಕದಲ್ಲಿ

ಜನ್ಮವೆತ್ತಿ ದುಃಖಪಟ್ಟು, ಅನಂತರ ಭಾವೀ ತೀರ್ಥಂಕರರಲ್ಲಿ ಮೊದಲನೆಯವ ನಾಗಿ ಪದ್ಮನಾಭಿಯೆಂಬ ಹೆಸರಿನಿಂದ ಮುಕ್ತಿಪಡೆಯುವೆ" ಎಂದು ಹೇಳಿದನು.

ಶ್ರೇಣಿಕನು ಅದನ್ನು ಕೇಳಿ ಬಹುವಾಗಿ ಆನಂದಿಸಿದನು. ಆತನ ಭವಾವಳಿಯನ್ನು ಕೇಳಿದ ಸಾವಿರಾರು ಜನರಿಗೆ ಸಮ್ಯಕ್ತ್ವ ಪ್ರಾಪ್ತವಾಯಿತು. ಅವರು ವೈರಾಗ್ಯಹೊಂದಿ ಜಿನದೀಕ್ಷೆಯನ್ನು ಕೈಕೊಂಡರು. ಅದೇ ಸಮಯ ದಲ್ಲಿ ಅನೇಕ ಗೃಹಸ್ಥರು ಶ್ರಾವಕರ ಹನ್ನೆರಡು ವ್ರತಗಳನ್ನು ಸ್ವೀಕರಿಸಿದರು.

ಶ್ರೇಣಿಕ ರಾಜನಂತೆಯೇ ವೈಶಾಲಿಯರಸನಾದ ಚೇಟಕನು ಕೂಡ ಭಗ ವಂತನ ಶ್ರಾವಕನಾದನು. ಶ್ರೇಣಿಕನ ಮಕ್ಕಳಾದ ವಾರಿಷೇಣನೂ ಅಭಯ ಕುಮಾರನೂ ಜಿನದೀಕ್ಷೆಯನ್ನು ಸ್ವೀಕರಿಸಿ ಪ್ರಸಿದ್ಧರಾದ ಮುನಿಗಳಾದರು. ಹೇಮಾಂಗದ ಪ್ರದೇಶದ ರಾಜಪುರಿಯ ಅಧಿಪತಿಯಾದ ಸತ್ಯಂಧರರಾಜನ ಮಗನಾದ ಜೀವಂಧರನು ಕೂಡ ಭಗವಂತನ ಶಿಷ್ಯನಾದನು. ಚೇಟಕನ ಮಗಳಾದ ಚಂದನೆಯು, ಅಂದು ಭಗವಂತನಿಗೆ ಭಿಕ್ಷೆಯಿಟ್ಟವಳು, ಪ್ರಭುವಿನ ಧರ್ಮೋಪದೇಶವನ್ನು ಕೇಳಿ, ದೀಕ್ಷಾಗ್ರಹಣಮಾಡಿ, ಮಹಾವೀರನ ಸಂಘದ ಆರ್ಯಿಕೆಯರಿಗೆಲ್ಲ ನಾಯಿಕೆಯಾಗಿದ್ದು, ಆಯುಷ್ಯ ಮುಗಿದನಂತರ ಸ್ವರ್ಗಕ್ಕೆ ಹೋದಳು.

ಭಗವಂತನು ತಾನು ಕೇವಲಿಯಾದಂದಿನಿಂದ ಮೂವತ್ತು ವರ್ಷಗಳ ವರೆಗೆ, ಎಂದರೆ ತನ್ನ ಎಪ್ಪತ್ತೆರಡನೆಯ ವರ್ಷದ ತನಕ, ಧರ್ಮೋಪದೇಶ ಮಾಡುತ್ತ ಸಂಚರಿಸಿದನು. ಆತನ ಸಮವಸರಣದಲ್ಲಿ ಇಂದ್ರಭೂತಿ ಮೊದ ಲಾದ ಹನ್ನೊಂದು ಗಣಧರರಿದ್ದರು; ವಾಯುಭೂತಿ, ಅಗ್ನಿಭೂತಿ, ಶುಚಿದತ್ತ, ಸುಧರ್ಮ, ಮಾಂಡವ್ಯ, ಮೌರ್ಯಪುತ್ರ, ಅಕಂಪನ, ಅಚಲ, ಮೇದಾರ್ಯ ಮತ್ತು ಪ್ರಭಾಸ ಎಂಬವರು ಉಳಿದ ಹತ್ತು ಗಣಧರರು. ಈ ಹನ್ನೊಂದು ಗಣಧರ ರಲ್ಲಿ ಇಂದ್ರಭೂತಿ ಮತ್ತು ಸುಧರ್ಮ ಹೊರತಾಗಿ ಉಳಿದವರು ಭಗವಂತನಿಗಿಂತ ಮುಂಚೆ ಮಡಿದರು.

ಇವರಲ್ಲದೆ ೯೯೦೦ ಮುನಿಗಳೂ ೩೦೦ ಅಂಗಪೂರ್ವಧಾರಿಗಳೂ ೧೩೦೦ ಅವಧಿಜ್ಞಾನಿಗಳೂ ೯೦೦ ಋದ್ಧಿವಿಕ್ರಿಯಾಯುಕ್ತರೂ ೫೦೦ ಮನಃಪರ್ಯಯ ಜ್ಞಾನಿಗಳೂ ೭೦೦ ಕೇವಲಜ್ಞಾನಿಗಳೂ ೯೦೦ ಅನುತ್ತರವಾದಿಗಳೂ—ಒಟ್ಟು ೧೪೦೦೦ ಮುನಿಗಳೂ ೩೬೦೦೦ ಆರ್ಯಿಕೆಯರೂ ಭಗವಂತನ ಸಮವಸರಣ ದೊಡನೆ ವಿಹರಿಸುತ್ತಿದ್ದರು:

ಇಷ್ಟು ಮಾತ್ರವಲ್ಲದೆ ಒಂದು ಲಕ್ಷ ಶ್ರಾವಕರೂ ಮೂರು ಲಕ್ಷ ಶ್ರಾವಿಕೆಯರೂ ಅಸಂಖ್ಯ ದೇವದೇವಾಂಗನೆಯರೂ ಭಗವಂತನ ಧರ್ಮೋಪದೇಶದಂತೆ ನಡೆಯುತ್ತಿದ್ದರು.

## ಮೋಕ್ಷ ಕಲ್ಯಾಣ

ಭಗವಂತನಿಗೆ ಎಪ್ಪತ್ತೆರಡು ವರ್ಷವಾಯಿತು. ಮುಕ್ತಿ ಪಡೆಯುವುದಕ್ಕೆ ಒಂದು ಮಾಸ ಮುಂಚೆ ಭಗವಂತನು ಬಿಹಾರಿನಲ್ಲಿಯ ಪಾವಾಪುರಿಗೆ ಬಂದು ನಿಂತನು. ಪಾವಾಪುರಿಯ ವನದ ನಡುವೆ ಒಂದು ಸರೋವರವಿತ್ತು. ಅದರ ಪಕ್ಕದ ಎತ್ತರವಾದ ಸ್ಥಲದಲ್ಲಿ ಕುಳಿತು ಶುಕ್ಲಧ್ಯಾನವನ್ನು ಪ್ರಾರಂಭಿಸಿ, ಉಳಿದಿದ್ದ ನಾಲ್ಕು ಅಘಾತಿಕರ್ಮದ ೮೫ ಪ್ರಕೃತಿಗಳನ್ನು ಸಂಪೂರ್ಣವಾಗಿ ನಾಶಗೊಳಿಸಿದನು. ನಾಶಗೊಳಿಸಿ ಕಾರ್ತಿಕ ಕೃಷ್ಣ ಚತುರ್ದಶಿಯ ರಾತ್ರೆ ಉಳಿದ ಅಮಾವಾಸ್ಯೆಯ ಪ್ರಭಾತದಲ್ಲಿ ಸ್ವಾತಿನಕ್ಷತ್ರಯೋಗದಲ್ಲಿ ಭಗವಂತನ ಜೀವವು ನಶ್ವರವಾದ ಶರೀರವನ್ನು ತೊರೆದು ಲೋಕಾಗ್ರದಲ್ಲಿ ಹೋಗಿ ನೆಲಸಿತು.

ಆಗ ಭಗವಂತನ ನಖ ಕೇಶ ಹೊರತಾಗಿ ಶರೀರ ಸರ್ವವೂ ಕರ್ಪೂರದಂತೆ ಲಯವಾಯಿತು. ಪ್ರಭುವಿನ ಪರಿನಿರ್ವಾಣವನ್ನು ಅವಧಿಜ್ಞಾನದಿಂದ ತಿಳಿದ ಇಂದ್ರನು ಸಮಸ್ತ ದೇವತೆಗಳೊಡನೆ ಬಂದು, ಮಾಯಾಶರೀರವನ್ನು ರಚಿಸಿ ಅದಕ್ಕೆ ಆ ನಖ ಕೇಶಗಳನ್ನು ಅಂಟಿಸಿ, ಚಂದನಾದಿ ದಿವ್ಯದ್ರವ್ಯಗಳನ್ನು ಉಪಯೋಗಿಸಿ, ಅಗ್ನಿಕುಮಾರನ ಮಕುಟದಿಂದ ಉತ್ಪನ್ನವಾದ ಅಗ್ನಿಯಿಂದ ಆ ಶರೀರಕ್ಕೆ ಸಂಸ್ಕಾರಗೆಯ್ದನು. ಆ ಪರಿನಿರ್ವಾಣೋತ್ಸವವಾದನಂತರ ದೇವತೆಗಳೆಲ್ಲ ಸ್ವಸ್ಥಾನಗಳಿಗೆ ತೆರಳಿದರು.

ಭಗವಂತನು ನಿರ್ವಾಣಪಡೆದ ಸಮಯದಲ್ಲಿಯೇ ಗೌತಮ ಗಣಧರನಿಗೆ ಕೇವಲಜ್ಞಾನ ಹುಟ್ಟಿತು. ಆ ಕಾಲದಲ್ಲಿ, ಭಗವಂತನ ಪರಿನಿರ್ವಾಣವೂ ಗೌತಮಸ್ವಾಮಿಯ ಕೇವಲ ಜ್ಞಾನೋತ್ಪತ್ತಿಯೂ ಸಂದ ಸಮಯದಲ್ಲಿ, ಅಮಾವಾಸ್ಯೆಯ ಕತ್ತಲು ಇನ್ನೂ ಉಳಿದಿರುವಾಗ, ಆ ಎರಡೂ ಉತ್ಸವಗಳ ಸ್ಮಾರಕವಾಗಿ ದೇವತೆಗಳು ರತ್ನಮಯ ದೀಪಗಳನ್ನು ಬೆಳಗಿದರು; ಜನರು ತುಪ್ಪ ಕರ್ಪೂರ ತೈಲಗಳಿಂದ ದೀಪ ಹತ್ತಿಸಿದರು. ಅಂದು ಪ್ರಾರಂಭವಾದ ದೀಪಾವಲಿಯನ್ನು ಮಹಾವೀರ ನಿರ್ವಾಣದ ನೆನಪಿನಿಂದ ಇಂದೂ ಸರ್ವತ್ರ ಆಚರಿಸುವರು.

"ಶಾಕ್ಯ ಸಾಹಿತ್ಯ ಮಂಟಪ"

ಮಲ್ಲೇಶ್ವರ—ಬೆಂಗಳೂರು

## ಪ್ರಕಟಣೆಗಳು

(೧೯೩೭—೧೯೩೮)

---

ಬುದ್ಧ ವಚನ ಪರಿಚಯ ಮತ್ತು ಮಿಲಿಂದ ಪ್ರಶ್ನೆ
ಪಾಲಿ ಪಜ್ಜ ಪುಪ್ಫಂಜಲಿ
ಮೂರು ಪಾಲಿ ಸೂತ್ರಗಳು
ಬುದ್ಧನು ಹೇಳಿದ ಕತೆಗಳು*
ಧಮ್ಮಪದ*

ಶಾಕ್ಯ ಸಾಹಿತ್ಯ ಮಂಟಪದ ಒಂದು ಪ್ರಕರಣ
ಧರ್ಮ—ಸಾಹಿತ್ಯ—ದೃಷ್ಟಿ
ಬುದ್ಧನ ಕಾಲದ ತೀರ್ಥಕರೂ ತೀರ್ಥಕರರೂ

ಮಹಾವೀರನ ಮಾತುಕತೆ
ಶ್ರೀ ಗೋಮಟೇಶ್ವರ
ಭಗವಾನ್ ಮಹಾವೀರ
ಶ್ರೀ ಪಾರ್ಶ್ವನಾಥ*



---

* ಈ ಗುರುತಿನವು ಅಚ್ಚಿನಲ್ಲಿವೆ.

# ಅಭಿಪ್ರಾಯಗಳು

## 'ಬುದ್ಧವಚನ ಪರಿಚಯ ಮತ್ತು ಮಿಲಿಂದ ಪ್ರಶ್ನೆ'
## 'ಪಾಲಿ ಪಜ್ಜ ಪುಷ್ಪಂಜಲಿ'

---

**"Triveni"**, *Madras, July 1937:*

". . . an excellent translation of Selections from the Pa Buddhistic Texts and forms a very useful introduction to th study of Buddhism . . . The translation is in chaste Kannad which retains all the beauty and grace of the original Pali, whil at the same time avoiding the tiresome repetitions found in th original . . . Such works as these are not merely of academi or scholarly interest, but are as much necessary for a man of th world to guide him in his life and everyday activities . . . Th book is beautifully bound and the author's brief introduction the select index and the glossary are extremely useful."

**"Modern Review"**, *June 1937:*

". . . This work was long overdue . . . The translation from the original Pali sources in chaste Kannada in an elegan style is to be appreciated . . . The printing and get-up i excellent."

**"The Hindu"**, *23rd May 1937:*

"The whole work bears the impress of the tremendou efforts put forward by the author and of his desire to serve Buddhism . . . The book will prove as an incentive at least to some, to taste the beauties of Pali literature at the very source."

# ಅಭಿಪ್ರಾಯಗಳು

## "ಶ್ರೀ ಗೋಮಟೇಶ್ವರ"

---

**Prof. A. N. Upadhye,** M.A., *Prof. of Ardhamagadhi, Rajaram College, Kolhapur:*

"Just today I read practically the whole of your valuable monograph on Sri Gommatesvara with pleasure and profit, you have made a judicious selection of the details and presented them in a vivid and lucid style. Gommata image has made valuable contribution to Indian Art, and you have done a great service by introducing, in words and selected pictures, Gommatesvara to the Kannada Public."

**M. Govinda Pai, Esq.,** *Manjeswar, S. Kanara:*

"It is an exceedingly well-written book teeming with interesting information. It really does much credit to you as its author. It reads like a romance from cover to cover and will be read with interest by one and all. Congratulations."

**D. Manjaya Hegde Esq.,** M.L.C., *Dharmastal, S. Kanara:*

"The book is nicely and scholarly brought out. Certainly, the whole community will be grateful to you for your earnest endeavour in bringing into light such historical and traditional facts."

**M. C. Lakshmipathiah Esq.,** B. A., *General Secretary, Mysore Jaina Association:*

"We must thank you sincerely for the very enterprising and good work you have been doing in connection with Jaina Religion and Literature."

**ಶ್ರೀಯುತ ಶ್ರೀವರ್ಮ ಜೈನಿ,** ನೆಲ್ಲಿಕಾರು, ದಕ್ಷಿಣ ಕನ್ನಡ:

"ತಮ್ಮ 'ಗೌತಮ ಬುದ್ಧ' ಪುಸ್ತಕದಲ್ಲಿನ 'ತೀರ್ಥಕ' ಶಬ್ದದ 'ವಿವೇಕಾಭ್ಯುದಯ' ಪತ್ರಿಕೆಯಲ್ಲಿ ಹೊರಟ ಖಂಡನ ಮಂಡನ ಲೇಖನ ಮನನೊಂದಿರುವ ಜೈನರಿದ್ದರೆ ಅವರೊಮ್ಮೆ ಈ ಪುಸ್ತಕವನ್ನು ಓದಲೇ ನಿಜವಾಗಿಯೂ ತಮಗೆ ಜೈನಧರ್ಮದಲ್ಲಿ ನಿಷ್ಪಕ್ಷಪಾತ ಬುದ್ಧಿಯು ಸ್ಪಷ್ಟವಾಗುತ್ತದೆ. ಇರಲಿ. ತಾವು ಕೈಕೊಂಡ ಪ್ರಯತ್ನವು ಸ್ತುತ್ಯವಾ

---

ಈ ಎಲ್ಲ ಪುಸ್ತಕಗಳೂ

**ಸತ್ಯಶೋಧನ ಪ್ರಕಟನಾಲಯ, ಕೋಟೆ, ಬೆಂಗಳೂರು**

ಇವರಲ್ಲಿ ದೊರೆಯುತ್ತವೆ.